ಸದರಿ ಕಾರಣ ಕೇಳುವ ನೋಟೀಸಿಗೆ ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಸಿ.ಎಂ.ಹಿರೇಮಠ, ಇವರು ತಮ್ಮ ವಿರುದ್ಧದ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿರುತ್ತಾರೆ ಹಾಗೂ ತಮ್ಮ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಬೇಕೆಂದು ವಿನಂತಿಸಿಕೊಂಡಿದ್ದಾರೆ.

ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 56 ಎಡಿಇ 2006, ಬೆಂಗಳೂರು, ದಿನಾಂಕ:11ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(2)ರಡಿಯಲ್ಲಿ ಶ್ರೀ ಸಿ.ಎಂ.ಹಿರೇಮಠ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ: 1033, 9ನೇ 'ಬಿ' ಮೇಯಿನ್, ಜ್ಯುಡಿಷಿಯಲ್ ಲೇಔಟ್, ಜಿ.ಕೆ.ವಿ.ಕೆ ಪೋಸ್ಟ್, ಬೆಂಗಳೂರು–560065 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಡಿಯಲ್ಲಿ ಗದಗ್ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಯವರಿಗೆ ದಿನಾಂಕ: 23–08–2005ರ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ.6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಗದಗ್ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ಚೌಕಿಮಠ**

ಪಿ.ಆರ್. 493

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಬಿ.ಟಿ.ಕೃಷ್ಣೇಗೌಡ, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು ಹಾಗೂ ಶ್ರೀ ಕೆ.ಪುಟ್ಟಸ್ವಾಮಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ಬಿಂಡಿಗನವಿಲೆ, ನಾಗಮಂಗಲ ತಾಲ್ಲೂಕು ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :** ಸಹಾಯಕ ನಿಬಂಧಕರು, ಕಾನೂನು ಅಭಿಪ್ರಾಯ-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂ: Compt/Uplok/Mys-1567/2003, Dt:20-12-2005.

2 ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರ ಪತ್ರ ಸಂ: ಇಎಸ್‌ಟಿ(2)34/2006-07, ದಿನಾಂಕ: 23-02-2007

3 ಕಾರಣ ಕೇಳುವ ನೋಟೀಸ್ ದಿನಾಂಕ: 24-06-2007.

4 ಶ್ರೀ ಬಿ.ಟಿ.ಕೃಷ್ಣೇಗೌಡ, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು ಇವರ ಲಿಖಿತ ಸಮಜಾಯಿಷಿ ದಿನಾಂಕ:10-07-2007.

5 ಶ್ರೀ ಕೆ. ಪುಟ್ಟಸ್ವಾಮಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ಬಿಂಡಿಗನವಿಲೆ, ನಾಗಮಂಗಲ ತಾಲ್ಲೂಕು ಇವರ ಲಿಖಿತ ಸಮಜಾಯಿಷಿ ದಿನಾಂಕ: 06-07-2007.

**ಪ್ರಸ್ತಾವನೆ:**

ಶ್ರೀ ಬಿ.ಟಿ.ಕೃಷ್ಣೇಗೌಡ, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು ಹಾಗೂ ಶ್ರೀ ಕೆ. ಪುಟ್ಟಸ್ವಾಮಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ಬಿಂಡಿಗನವಿಲೆ, ನಾಗಮಂಗಲ ತಾಲ್ಲೂಕು ಇವರುಗಳ ವಿರುದ್ಧ ದಿನಾಂಕ: 06-10-2003ರಂದು ಫಿರ್ಯಾದುದಾರರಾದ ಶ್ರೀಮತಿ ಗಂಗಮ್ಮ ಕೋಂ ಸಿದ್ಧಲಿಂಗಯ್ಯ, ನಾಗಮಂಗಲ ಇವರು ತಮಗೆ ಮೀಸಲಾತಿ ಇದ್ದರೂ ಸಹಾ ಬಿಸಿ ಊಟ ಸಿಬ್ಬಂದಿ ಹುದ್ದೆಗೆ ಮೀಸಲಾತಿಯವರಿಗೆ ಆದ್ಯತೆ ಕೊಡದೆ ಬೇರೆ ವರ್ಗದ ಜನಾಂಗದವರಿಗೆ ನೇಮಕಾತಿ ಮಾಡಿಕೊಂಡಿರುತ್ತಾರೆಂದು ಮಾನ್ಯ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರಿಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರನ್ನು ಪರಿಶೀಲಿಸಿ ಸಹಾಯಕ ನಿಬಂಧಕರು, ಕಾನೂನು ಅಭಿಪ್ರಾಯ-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ. (1)ರ ಪತ್ರದಲ್ಲಿ ಮಾನ್ಯ ಉಪಲೋಕಾಯುಕ್ತರು ದಿನಾಂಕ; 13-12-2005ರ ವರದಿ ಮತ್ತು ಸಂಬಂಧಿಸಿದ ದಾಖಲಾತಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಾ ಕರ್ನಾಟಕ ಲೋಕಾಯುಕ್ತ, ಅಧಿನಿಯಮ ಕಲಂ 7(2)ರನ್ವಯ ಪ್ರಾರಂಭಿಕ ತನಿಖೆಯನ್ನು ನಡೆಸಿ ಸದರಿ ಅಧಿನಿಯಮ ಕಲಂ 12(3)ರನ್ವಯ ಆರೋಪಿತ ಸರ್ಕಾರಿ ನೌಕರರ (ಎದುರಾಳಿಗಳು) ಇವರ ವಿರುದ್ಧ ಉಗ್ರ ದಂಡನೆ ವಿಧಿಸುವ ಕಾರ್ಯ ವಿಧಾನದ ಅನ್ವಯ ಶಿಸ್ತು ಕ್ರಮ ಜರುಗಿಸಲು ಶಿಫಾರಸ್ಸು ಮಾಡಲಾಗಿದೆ.

ಆದ್ದರಿಂದ ಸರ್ಕಾರವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲು ಮಾನ್ಯ ಸಹಾಯಕ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಒಪ್ಪಿ, ಶ್ರೀ ಬಿ.ಟಿ.ಕೃಷ್ಣೇಗೌಡ, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು ಹಾಗೂ ಶ್ರೀ ಕೆ.ಪುಟ್ಟಸ್ವಾಮಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಅಧಿನಿಯಮ 12(3)ರನ್ವಯ ಶಿಫಾರಸ್ಸನ್ನು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಗಳ ನಿಯಮ 14(A) ರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪಲೋಕಾಯುಕ್ತರು ಇವರಿಗೆ ವಹಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 03 ಎಡಿಇ 2006, ಬೆಂಗಳೂರು, ದಿನಾಂಕ:06ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಬಿ.ಟಿ.ಕೃಷ್ಣೇಗೌಡ, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು (ಪ್ರಸ್ತುತ ನಿವೃತ್ತರು) ಹಾಗೂ ಶ್ರೀ ಕೆ. ಪುಟ್ಟಸ್ವಾಮಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು, ಬಿಂಡಿಗನವಿಲೆ, ನಾಗಮಂಗಲ ತಾಲ್ಲೂಕು ಇವುರಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಗಳು ನಿಯಮ 11ರನ್ವಯ ಇಲಾಖಾ ವಿಚಾರಣೆ ಜರುಗಿಸಿ ಸರ್ಕಾರಕ್ಕೆ ಎರಡು ತಿಂಗಳೊಳಗಾಗಿ ವರದಿ ನೀಡಲು ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಸದರಿ ನಿಯಮಗಳನ್ವಯ ನಿಯಮ 14(A) ರನ್ವಯ ವಹಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ಚೌಕಿಮಠ**

ಪಿ.ಆರ್. 429

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಕೆ.ಭೀಮರಾವ್, ಹಿಂದಿನ ಯಲ್ಬುರ್ಗಾ ತಾಲ್ಲೂಕಿನ ತಹಶೀಲ್ದಾರ್ ಇವರ ವಿರುದ್ಧ ಲೋಕಾಯುಕ್ತ ಟ್ರಾಪ್ ಪ್ರಕರಣದ ಬಗ್ಗೆ.

**ಓದಲಾಗಿದೆ :** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ,ಬೆಂಗಳೂರು ಇವರ ಪತ್ರ ಸಂ: LOK/INV (G)/ G-9/ Cr-2/ 2000 GVT, Dt: 21-08-2000

2 ಸರ್ಕಾರದ ಆದೇಶ ಸಂ: ಕಂಇ 52 ಎಡಿಇ 2000, ದಿನಾಂಕ: 07-12-2001.

3 ಸಹಾಯಕ ನಿಬಂಧಕರು, ಕಾನೂನು ಅಭಿಪ್ರಾಯ-4, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂ: Compt/ Uplok/GLB/ 223/2005/ ARLO-4, Dt:07-7-2007

**ಪ್ರಸ್ತಾವನೆ:**

ಶ್ರೀ ಕೆ. ಭೀಮರಾವ್, ಹಿಂದಿನ ತಹಶೀಲ್ದಾರ್, ಯಲ್ಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರು ಶ್ರೀ ಕೆ.ಬಸಣ್ಣ, ಉಪ ತಹಶೀಲ್ದಾರ್, ಯಲ್ಬುರ್ಗಾ ತಾಲ್ಲೂಕು, ಕುಕನೂರು ನಾಡಕಛೇರಿ ಎಂಬುವವರಿಂದ ವೈದ್ಯಕೀಯ ಮರು ಪಾವತಿ ಬಿಲ್ಲನ್ನು ಮೇಲಾಧಿಕಾರಿಗಳಿಗೆ ಕಳುಹಿಸಲು ರೂ.1000/- ಗಳ ಅಕ್ರಮ ಸಂಭಾವನೆಯನ್ನು ದಿನಾಂಕ: 06-07-2000 ರಂದು ಪಡೆಯುತ್ತಿದ್ದಾಗ ಲೋಕಾಯುಕ್ತರವರಿಂದ ಟ್ರಾಪ್ ಆದ ಕಾರಣ ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಹೆಚ್ಚುವರಿ ಪೋಲೀಸ್

ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ: 21-08-2000 ರಲ್ಲಿ ಶ್ರೀ ಕೆ. ಭೀಮರಾವ್‌ರವರನ್ನು ಅಮಾನತ್ತಿನಲ್ಲಿಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಈ ಮಧ್ಯದಲ್ಲಿ ಶ್ರೀ ಕೆ.ಭೀಮರಾವ್, ತಹಶೀಲ್ದಾರ್ ಇವರನ್ನು ಬೇರೆ ಕಡೆ ವರ್ಗಾಯಿಸಿದ್ದರಿಂದ ಅವರ ಲೀನ್ ಮಾರ್ಪಾಡಾಗಿದ್ದುದರಿಂದ ಅಮಾನತ್ತುಗೊಳಿಸುವ ವಿಷಯವನ್ನು ಸರ್ಕಾರವು ಕೈ ಬಿಟ್ಟಿರುತ್ತದೆ.

ನಂತರದಲ್ಲಿ ಮೇಲೆ ಓದಲಾದ ಕ್ರ.ಸಂ. (2), ದಿನಾಂಕ: 07-12-2001 ರ ಆದೇಶದಲ್ಲಿ ಸದರಿ ಅಧಿಕಾರಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿತ್ತು. ಪ್ರಸ್ತುತ ಲೋಕಾಯುಕ್ತರ ಕಛೇರಿಯಿಂದ ಮೇಲೆ ಓದಲಾದ ಕ್ರ.ಸಂ. (3), ದಿನಾಂಕ: 07-07-2007ರಲ್ಲಿ ಸಹಾಯಕ ನಿಬಂಧಕರು, ಕಾನೂನು ಅಭಿಪ್ರಾಯ-4, ತನಿಖಾ ವರದಿಯನ್ನು ಕಳುಹಿಸಿ ಶ್ರೀ ಕೆ. ಭೀಮರಾವ್, ತಹಶೀಲ್ದಾರ್ ಇವರು ತಪ್ಪಿತಸ್ಥರೆಂದು ಮೇಲ್ನೋಟಕ್ಕೆ ದೃಢಪಟ್ಟಿದ್ದರಿಂದ ಸರ್ಕಾರವು ಸದರಿ ತನಿಖಾ ವರದಿಯನ್ನು ಒಪ್ಪಿಕೊಂಡು ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(A) ರನ್ವಯ ಮಾನ್ಯ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 52 ಎಡಿಇ 2000,ಬೆಂಗಳೂರು, ದಿನಾಂಕ:26ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು, ಶ್ರೀ ಕೆ. ಭೀಮರಾವ್, ಹಿಂದಿನ ತಹಶೀಲ್ದಾರ್, ಯಲ್ಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ ಪ್ರಸ್ತುತ ವಿಶೇಷ ತಹಶೀಲ್ದಾರ್, ಕೆ.ಎಸ್.ಎಫ್.ಸಿ, ಬೆಂಗಳೂರು ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ, ನಿಯಮ 14(A) ರನ್ವಯ ಇಲಾಖಾ ವಿಚಾರಣೆ ಜರುಗಿಸಿ ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ.ಚೌಕಿಮಠ**
ಪಿ.ಆರ್. 379
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಮಹಮದ್ ಸೈಫುಲ್ಲಾ, ಹಿಂದಿನ ತಹಶೀಲ್ದಾರ್, ಬ್ಯಾಡಗಿ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2007, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2008**

ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ಮಹ್ಮದ್ ಸೈಫುಲ್ಲಾ (ಈಗ ನಿವೃತ್ತರು), ಇವರು ಈ ಹಿಂದೆ ಸೇವೆಯಲ್ಲಿದ್ದಾಗ ಬ್ಯಾಡಗಿ ತಾಲ್ಲೂಕಿನ ಕಾಟೇನಹಳ್ಳಿ ಗ್ರಾಮದ ರಿ.ಸ.ನಂ. 54/2 ಕ್ಷೇತ್ರ 5–ಎಕರೆ 00–ಗುಂಟೆ ಜಮೀನಿನ ಖಾತೆ ಬದಲಾವಣೆಗೆ ಸಂಬಂಧಪಟ್ಟಂತೆ ಕರ್ತವ್ಯಲೋಪ ಎಸಗಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುತ್ತದೆ.

ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಮಹ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್, ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರಡಿಯಲ್ಲಿ ನಿಗಧಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸಿರುತ್ತದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಪಿ.ಆರ್. 387
**ಬಿ.ವಿ.ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಸಿ.ಎಂ.ಹಿರೇಮಠ್, ತಹಶೀಲ್ದಾರ್, ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 07 ಎಡಿಇ 2007, ದಿನಾಂಕ:5-3-2007.
2 ಶ್ರೀ ಸಿ.ಎಂ.ಹಿರೇಮಠ್, ಅಮಾನತ್ತಿನಲ್ಲಿರುವ ತಹಶೀಲ್ದಾರ್ ಇವರ ಮನವಿ 6-12-2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.1ರ ಆದೇಶದಲ್ಲಿ ಶ್ರೀ ಸಿ.ಎಂ.ಹಿರೇಮಠ್, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ ಇವರು ಮಾನ್ಯ ಮುಖ್ಯಮಂತ್ರಿಗಳ ಗ್ರಾಮವಾಸ್ತವ್ಯದ ಬಗ್ಗೆ ಅವಹೇಳನಕಾರಿಯಾಗಿ ಸಾರ್ವಜನಿಕರ ಎದುರಿಗೆ ಮಾತನಾಡಿ ಸರ್ಕಾರಿ ಅಧಿಕಾರಿ/ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಹಾಗೂ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ಅನ್ನು ಉಲ್ಲಂಘಿಸಿದ್ದರಿಂದ, ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಡಿ)ರಡಿಯಲ್ಲಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.2 ರನ್ವಯ, ಶ್ರೀ ಸಿ.ಎಂ.ಹಿರೇಮಠ್ ಇವರು ದಿನಾಂಕ:6-12-2007 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ತಾವು ಈಗಾಗಲೇ ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ನೀಡಿದ್ದ ಕಾರಣ ಕೇಳುವ ನೋಟೀಸಿಗೆ ಉತ್ತರವನ್ನು ಸಹಾ ಸಲ್ಲಿಸಲಾಗಿದೆ. ಅಲ್ಲದೆ, ಮಾನ್ಯ ಕೆಎಟಿಯಲ್ಲಿ ತಾವು ಸಲ್ಲಿಸಿದ್ದ ಅರ್ಜಿ ಸಂಖ್ಯೆ: 1474/2007, ದಿನಾಂಕ:6-11-2007ರಲ್ಲಿ ಮಾನ್ಯ ಕೆಎಟಿಯು ಆದೇಶ ನೀಡಿ ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 21 ಸೇಇವಿ 2003, ದಿನಾಂಕ:6-2-2003ರ ಮೇರೆಗೆ ದಿನಾಂಕ: 5-3-2007ರ ಅಮಾನತ್ತು ಆದೇಶವನ್ನು ರಿವ್ಯೂ ಮಾಡಿ ನಿಯಮಾನುಸಾರ ಒಂದು ತಿಂಗಳೊಳಗಾಗಿ ಸೂಕ್ತ ಕ್ರಮ ತೆಗೆದುಕೊಳ್ಳಲು ನಿರ್ದೇಶನವಿರುತ್ತದೆ. ಆದ್ದರಿಂದ, ತಮ್ಮ ಅಮಾನತ್ತನ್ನು ರದ್ದುಪಡಿಸಿ ಪುನ: ಸೇವೆಗೆ ತೆಗೆದುಕೊಳ್ಳಲು ಮನವಿ ಮಾಡಿರುತ್ತಾರೆ.

ಮಾನ್ಯ ಕೆಎಟಿಯ ಆದೇಶವನ್ನು ಹಾಗೂ ಶ್ರೀ ಸಿ.ಎಂ.ಹಿರೇಮಠ್ ಇವರ ದಿನಾಂಕ:6-12-2007ರ ಮನವಿಯನ್ನು ಪರಿಶೀಲಿಸಿ ಸರ್ಕಾರವು ಶ್ರೀ ಸಿ.ಎಂ.ಹಿರೇಮಠ್, ತಹಶೀಲ್ದಾರ್ ಇವರ ಅಮಾನತ್ತನ್ನು ರದ್ದುಪಡಿಸಿ ಪುನ: ಸೇವೆಗೆ ಪುನರ್‌ಸ್ಥಾಪಿಸಲು ಸರ್ಕಾರವು ನಿರ್ಧರಿಸಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 07 ಎಡಿಇ 2007(ಭಾಗ) ಬೆಂಗಳೂರು, ದಿನಾಂಕ: 10ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಸಿ.ಎಂ.ಹಿರೇಮಠ್ ಹಾಲಿ ಅಮಾನತ್ತಿನಲ್ಲಿರುವ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(5)(ಸಿ) ರಲ್ಲಿ ಪ್ರಬುದ್ಧವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಇವರನ್ನು ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ಚೌಕಿಮಠ**

ಪಿ.ಆರ್. 172

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** 1998ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳ ಜನ್ಮ ದಿನಾಂಕವನ್ನು ಅಂಗೀಕರಿಸುವ ಕುರಿತು.

**ಉಲ್ಲೇಖ::** 1 ಸರ್ಕಾರದ ಅಧಿಸೂಚನೆ ಸಂ:ಕಂಇ 08 ಎಟಿಎಸ್ 2006, ದಿನಾಂಕ:15-4-2006

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗದ ಬೆಂಗಳೂರು, ಅಧಿಸೂಚನೆ ಸಂ: Conf.25/2005-06/PSC, Bangalore, Dated:28-02-2006 ರನ್ವಯ ಒಟ್ಟು 50 ಜನ 1998ನೇ ತಂಡದ ಪರೀಕ್ಷಾರ್ಥ ತಹಶೀಲ್ದಾರರುಗಳನ್ನು ಆಯ್ಕೆಗೊಂಡಿದ್ದು ಸದರಿ ಆಯ್ಕೆಯನ್ವಯ ಮೇಲೆ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 15-04-2006ರಲ್ಲಿ ಒಟ್ಟು 50 ಪರೀಕ್ಷಾರ್ಥ ತಹಶೀಲ್ದಾರರುಗಳಾಗಿ (ಗುಂಪು-ಬಿ ಹುದ್ದೆ) ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಇದರಲ್ಲಿ ಶ್ರೀ ಮಲ್ಲಿಕಾರ್ಜುನ.ಎಂ. ಮಲ್ಲಿಹಳ್ಳಿ (ಕ್ರ.ಸಂ.49) ಇವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಸದರಿಯವರುಗಳು ಕರ್ನಾಟಕ ಲೋಕಸೇವಾ ಆಯೋಗದ ಅಂತಿಮ ಆಯ್ಕೆ ಅಧಿಸೂಚನೆಯಲ್ಲಿ ನಮೂದಿಸಿ ಹಾಗೂ ರಾಜ್ಯ ಪತ್ರದಲ್ಲಿ ಪ್ರಕಟಿಸಿರುವ ಜನ್ಮ ದಿನಾಂಕದ ಹಾಗೂ ಅವರುಗಳ ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ ನಮೂದಿಸಿದ ಜನ್ಮ ದಿನಾಂಕ ಆಧಾರದ ಮೇಲೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಜನ್ಮ ದಿನಾಂಕ ಅಂಗೀಕರಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 348 ಎಎಸ್‌ಡಿ 2007, ಬೆಂಗಳೂರು, ದಿನಾಂಕ:04ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ 1998ನೇ ತಂಡದ ಒಟ್ಟು 49 ಪರಿವೀಕ್ಷಣಾ ತಹಶೀಲ್ದಾರರುಗಳ ಜನ್ಮ ದಿನಾಂಕವನ್ನು ಅಂಗೀಕರಿಸಿ ಆದೇಶಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ.ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಅನುಬಂಧ**

**1998ನೇ ತಂಡದ ಗ್ರೇಡ್-2 ತಹಶೀಲ್ದಾರರುಗಳ ಜನ್ಮ ದಿನಾಂಕ ಅಂಗೀಕರಿಸುವ ಪಟ್ಟಿ**

| ಕ್ರ. ಸಂ. | ತಹಶೀಲ್ದಾರರ ಹೆಸರು– ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ ಅಂಕ ಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 1 | ಉದಯಕುಮಾರ್‌ಶೆಟ್ಟಿ. ಬಿ | 21-07-68 | |
| 2 | ಶಿವಪ್ರಸಾದ್. ಪಿ.ಆರ್ | 29-05-73 | **ಸೇವೆಯಿಂದ ಬಿಟ್ಟುಹೋಗಿರುತ್ತಾರೆ.** |
| 3 | ಮಂಜುನಾಥ್.ಪಿ.ಎಸ್ | 08-05-69 | |
| 4 | ಮಧೂಕೇಶ್ವರ್.ಎಸ್.ಎಸ್. | 06-02-66 | |
| 5 | ವರಪ್ರಸಾದ್‌ರೆಡ್ಡಿ.ಬಿ.ಎನ್ | 02-06-74 | |
| 6 | ಸತೀಶ್‌ಬಾಬು. ಹೆಚ್.ಎಸ್ | 20-06-72 | |
| 7 | ಮಹೇಶ್‌ಬಾಬು.ಎನ್ | 22-07-73 | |
| 8 | ಪ್ರವೀಣ್.ಪಿ.ಬಾಗೇವಾಡಿ (ಎಸ್.ಸಿ) | 21-04-74 | |
| 9 | ಕಾತ್ಯಾಯಿನಿದೇವಿ. ಎಸ್ | 11-07-69 | |
| 10 | ಮಹದೇವ್. ಎ. ಮುರಗಿ | 20-07-66 | |
| 11 | ನಾಗಹನುಮಯ್ಯ. ಜಿ.ಹೆಚ್. | 10-03-71 | |
| 12 | ದಾಸೇಗೌಡ.ಎಂ. | 12-04-68 | |
| 13 | ದೇವರಾಜ್.ಎ | 01-05-71 | |
| 14 | ರವಿ.ಎಂ. ತಿರ್ಲಾಪುರ್ | 01-06-71 | |
| 15 | ಮಂಜುನಾಥಸ್ವಾಮಿ.ಬಿ.ಎಸ್ | 15-08-73 | |
| 16 | ಜವರೇಗೌಡ. ಟಿ | 10-09-66 | |
| 17 | ಶಶಿಧರ್ ಬಗಲಿ | 07-05-64 | |
| 18 | ರೇಷ್ಮಾ ತಹಸೀನ್ | 18-11-73 | |
| 19 | ಇಸ್ಮಾಯಿಲ್ ಸಾಹೇಬ್ ಶಿರಹಟ್ಟಿ | 01-04-69 | |
| 20 | ಜಯಮಾದವ.ಪಿ | 15-07-74 | |
| 21 | ವಾಣಿ. ವಿ | 26-01-75 | |
| 22 | ಖಾಜಿ ನಫೀಜಾ | 13-12-69 | |
| 23 | ಧನಲಕ್ಷ್ಮಿ | 11-02-72 | |
| 24 | ಕವಿತಾ ರಾಜರಾಂ | 04-11-74 | |
| 25 | ಹರಿಶಿಲ್ಪ. ಜಿ.ಆರ್. | 15-08-75 | |
| 26 | ರಶ್ಮಿ. ಜಿ | 23-10-74 | |
| 27 | ರೇಖಾ. ಟಿ | 17-05-72 | |
| 28 | ಸುರೇಶ್ ಕುಮಾರ್.ಕೆ.ಎಂ (ಎಸ್.ಸಿ) | 10-06-72 | |

| ಕ್ರ. ಸಂ. | ತಹಶೀಲ್ದಾರರ ಹೆಸರು– ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ ಅಂಕ ಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 29 | ವೆಂಕಟೇಶ್‌ಮೂರ್ತಿ.ವಿ. (ಎಸ್.ಸಿ) | 23-07-71 | |
| 30 | ರಂಗನಾಥ್ | 05-07-70 | |
| 31 | ದಯಾನಂದ್ ಬಂಢಾರಿ | 06-08-70 | |
| 32 | ರಾಚಪ್ಪ. ಎಂ | 01-02-73 | |
| 33 | ರಾಜುಮೊಗವೀರ.ಕೆ | 07-11-65 | |
| 34 | ಸುರೇಶ್.ಜಿ (ಎಸ್.ಸಿ) | 21-02-66 | |
| 35 | ವಿಜಯಕುಮಾರ್ ಹೊನಕೇರಿ (ಎಸ್.ಸಿ) | 10-03-75 | |
| 36 | ಮಂಜುನಾಥ್. ಎನ್ | 10-06-66 | |
| 37 | ನಾಗರಾಜ್.ಎಲ್.ಸಿ (ಎಸ್.ಟಿ) | 08-06-66 | |
| 38 | ರೂಪ.ಬಿ.ಆರ್. | 02-01-76 | |
| 39 | ನರಸಿಂಹಪ್ಪ (ಎಸ್.ಸಿ) | 25-04-71 | |
| 40 | ಭಾರತಿ. ಡಿ | 02-10-74 | ಸೇವೆಯಿಂದ ಬಿಟ್ಟುಹೋಗಿರುತ್ತಾರೆ. |
| 41 | ರೂಪಕಲಾ.ಟಿ.ಕೆ | 09-02-75 | |
| 42 | ರೂಪ.ಆರ್. | 27-01-74 | |
| 43 | ಶಾರದಾ. ಸಿ. ಕೋಲ್ಕರ್ (ಎಸ್.ಸಿ) | 20-08-72 | |
| 44 | ರೇಣುಕಾಂಬ | 04-04-62 | |
| 45 | ಶಾಂತಲ್.ಕೆ.ಟಿ (ಎಸ್.ಸಿ) | 13-01-73 | |
| 46 | ಕವಿತರಾಣಿ. ಆರ್. (ಎಸ್.ಸಿ) | 31-01-77 | |
| 47 | ಗಣಪತಿ. ಕಟ್ಟಿನಕೆರೆ | 21-06-61 | |
| 48 | ಆಶಾ ಪರ್ವಿನ್.ಎಸ್.ಎಂ | 07-06-71 | |
| 49 | ಕುಸುಮಕುಮಾರಿ.ಎಸ್ (ಎಸ್.ಟಿ) | 03-05-76 | |

**ಬಿ.ವಿ.ಚೌಕಿಮಠ**
ಪಿ.ಆರ್. 274 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** 2005ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳ ಜನ್ಮ ದಿನಾಂಕವನ್ನು ಅಂಗೀಕರಿಸುವ ಕುರಿತು.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ:22-06-2006

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗದ ಬೆಂಗಳೂರು, ಅಧಿಸೂಚನೆ ಸಂ: E(1)41/2005-06/ PSC, Bangalore, Dt: 04-05-2006 ರನ್ವಯ ಒಟ್ಟು 40 ಜನ 2005ನೇ ತಂಡದ ಪರೀಕ್ಷಾರ್ಥ ತಹಶೀಲ್ದಾರರುಗಳನ್ನು ಆಯ್ಕೆಗೊಂಡಿದ್ದು ಸದರಿ ಆಯ್ಕೆಯನ್ವಯ ಮೇಲೆ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 22-06-2006ರಲ್ಲಿ ಒಟ್ಟು 40 ಪರೀಕ್ಷಾರ್ಥ ತಹಶೀಲ್ದಾರರುಗಳಾಗಿ (ಗುಂಪು-ಬಿ ಹುದ್ದೆ) ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಸದರಿಯವರುಗಳು ಕರ್ನಾಟಕ ಲೋಕಸೇವಾ ಆಯೋಗದ ಅಂತಿಮ ಆಯ್ಕೆ ಅಧಿಸೂಚನೆಯಲ್ಲಿ ನಮೂದಿಸಿ ಹಾಗೂ ರಾಜ್ಯ ಪತ್ರದಲ್ಲಿ ಪ್ರಕಟಿಸಿರುವ ಜನ್ಮ ದಿನಾಂಕದ ಹಾಗೂ ಅವರುಗಳ ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ ನಮೂದಿಸಿದ ಜನ್ಮ ದಿನಾಂಕ ಆಧಾರದ ಮೇಲೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಜನ್ಮ ದಿನಾಂಕ ಅಂಗೀಕರಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 349 ಎಎಸ್‌ಡಿ 2007, ಬೆಂಗಳೂರು, ದಿನಾಂಕ:04ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ 2005ನೇ ತಂಡದ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳ ಜನ್ಮ ದಿನಾಂಕವನ್ನು ಅಂಗೀಕರಿಸಿ ಆದೇಶಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ.ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಅನುಬಂಧ**

**2005ನೇ ತಂಡದ ಗ್ರೇಡ್-2 ತಹಶೀಲ್ದಾರರುಗಳ ಜನ್ಮ ದಿನಾಂಕ ಅಂಗೀಕರಿಸುವ ಪಟ್ಟಿ**

| ಕ್ರ. ಸಂ. | ತಹಶೀಲ್ದಾರರ ಹೆಸರು– ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ ಅಂಕ ಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 1 | ನರಸಿಂಹರಾಜು. ಆರ್ | 21-05-78 | |
| 2 | ಸಿದ್ದಪ್ಪ ಹುಲಹಳ್ಳಿ | 01-06-80 | |
| 3 | ಲೋಕೇಶ್. ಹೆಚ್.ಡಿ | 25-04-74 | ಸೇವೆಯಿಂದ ಬಿಟ್ಟುಹೋಗಿರುತ್ತಾರೆ. |
| 4 | ಶಶಿಕುಮಾರ್ ಎನ್. | 05-06-81 | ಸೇವೆಯಿಂದ ಬಿಟ್ಟುಹೋಗಿರುತ್ತಾರೆ. |
| 5 | ಪ್ರವೀಣ್ ಕೆ.ಎಸ್. | 05-04-74 | |
| 6 | ನಟೇಶ್ ಡಿ.ಬಿ. | 21-07-73 | |
| 7 | ಚಿದಾನಂದ ಎಂ.ಎಸ್. | 20-07-74 | |
| 8 | ಅಜೀಸ್ ದೇಸಾಯಿ | 19-07-79 | |
| 9 | ರೂಪ ಐ.ಪಿ. | 23-07-78 | |
| 10 | ನಾಗರಾಜ್ ಹೆಚ್.ಎನ್. | 14-02-75 | |
| 11 | ಶಿವಾನಂದ ಮೂರ್ತಿ.ಬಿ.ಸಿ | 20-07-73 | |
| 12 | ರವೀಂದ್ರ ಕರಲಿಂಗಣ್ಣನವರ್ | 14-03-76 | |
| 13 | ಮಲ್ಲಿಕಾರ್ಜುನ ಬಿ. ಕೇರ್ ಆಫ್ | 10-09-78 | |
| 14 | ಮಂಜುಶ್ರೀ ಎನ್. | 24-07-82 | |
| 15 | ಭಾರತಿ ಹೊಳ್ಳೀಕೆರಿ | 01-06-78 | |
| 16 | ಮೇಘನಾ ಆರ್. | 03-11-83 | |
| 17 | ಚಂದ್ರಶೇಖರಯ್ಯ ಹೆಚ್.ಜಿ. | 17-06-76 | |
| 18 | ಸವಿತಾ ಎಂ.ಕೆ. | 15-03-79 | |
| 19 | ರಾಜೇಶ್ ಎಂ.ಆರ್. | 02-07-70 | |
| 20 | ವಿಜಯ್‌ಕುಮಾರ್ ಎ.ಬಿ. | 01-06-77 | |
| 21 | ಸಜೀದ್ ಅಹಮದ್ ಮುಲ್ಲಾ | 11-11-73 | |
| 22 | ವೀಣಾ ಬಿ.ಎನ್. | 22-07-76 | |
| 23 | ಶ್ರೀ ಹರ್ಷ ಎಸ್. ಶೆಟ್ಟಿ | 12-07-82 | ಸೇವೆಯಿಂದ ಬಿಟ್ಟುಹೋಗಿರುತ್ತಾರೆ. |
| 24 | ಜಯಶ್ರೀ ಶಿಂತ್ರಿ | 24-12-80 | |
| 25 | ಕುಮಾರಸ್ವಾಮಿ ಬಿ.ಟಿ. | 05-06-78 | |
| 26 | ಜಯಾ ಹೆಚ್. | 01-06-77 | |
| 27 | ಔದ್ರಾಮ | 15-06-75 | |
| 28 | ಸುಧಾ ಬಿ. | 08-08-79 | |
| 29 | ಮಂಜುನಾಥ ಎಂ.ಎನ್.(ಎಸ್.ಸಿ) | 13-08-79 | |

| ಕ್ರ. ಸಂ. | ತಹಶೀಲ್ದಾರರ ಹೆಸರು– ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ ಅಂಕ ಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 30 | ರವಿಚಂದ್ರನಾಯಕ್ (ಎಸ್.ಸಿ) | 17-07-79 | |
| 31 | ರಂಗಸ್ವಾಮಿ ಆರ್. | 21-07-71 | |
| 32 | ಅರುಣ್ ಕುಮಾರ್ (ಎಸ್.ಸಿ) | 10-07-79 | |
| 33 | ವೆಂಕಟರಾಮ ಎನ್.ಸಿ. (ಎಸ್.ಸಿ) | 01-06-78 | |
| 34 | ಶಿವೇಗೌಡ ಹೆಚ್.ಎನ್. | 15-02-73 | |
| 35 | ನವೀನ್ ಕುಮಾರ್ ರಾಜು ಎನ್. | 21-05-80 | |
| 36 | ದಾಕ್ಷಾಯಿಣಿ ಕೆ. (ಎಸ್.ಸಿ) | 06-10-76 | |
| 37 | ಗೀತಾ ಸಿ.ಡಿ (ಎಸ್.ಸಿ) | 01-06-79 | |
| 38 | ಗೀತಾ ಎನ್.ಆರ್. (ಎಸ್.ಟಿ) | 01-07-79 | |
| 39 | ಪ್ರಕಾಶ್ ಟಿ.ವಿ. | 15-05-64 | |
| 40 | ನಿರಂಜನ್. ಸಿ.ಸಿ | 08-04-77 | **ಸೇವೆಯಿಂದ ಬಿಟ್ಟುಹೋಗಿರುತ್ತಾರೆ.** |

ಪಿ.ಆರ್. 272

**ಬಿ.ವಿ.ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಶಶಿಕುಮಾರ್.ಎನ್. 2005ನೇ ಸಾಲಿನ ಗೆಜಿಟೆಡ್ ಪ್ರೊಬೇಷನರ್ ತಹಶೀಲ್ದಾರ್‌ರವರು ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು.

**ಓದಲಾಗಿದೆ:**
1 ದಿನಾಂಕ: 22-6-2006ರ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006
2 ಅಧಿಕೃತ ಜ್ಞಾಪನ ಸಂ: ಕಂಇ 135 ಎಎಸ್‌ಡಿ 2006, ದಿನಾಂಕ:25-8-2006.
3 ಸರ್ಕಾರದ ಅಧಿಸೂಚನೆ ಸಂ: ಕಂಇ 266 ಎಎಸ್‌ಡಿ 2007,ದಿನಾಂಕ:15-10-2007.
4 ಶ್ರೀ ಶಶಿಕುಮಾರ್.ಎನ್ ಇವರ ಮನವಿ ದಿನಾಂಕ:1-12-2007

**ಪ್ರಸ್ತಾವನೆ:**

ಕರ್ನಾಟಕ ಗೆಜಿಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: E(1)41/2005-06/PSC, ದಿನಾಂಕ: 4-5-2006ರನ್ವಯ ಆಯ್ಕೆಗೊಂಡ 2005ನೇ ಸಾಲಿನ 40 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 22-6-2006ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್ ಗ್ರೂಪ್-ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ.4) ಶ್ರೀ ಶಶಿಕುಮಾರ್.ಎನ್ ಇವರು ದಿನಾಂಕ:23-6-2006ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿರುತ್ತಾರೆ. ಉಲ್ಲೇಖ(2)ರ ಅಧಿಕೃತ ಜ್ಞಾಪನದಲ್ಲಿ ಪರೀಕ್ಷಾರ್ಥ ತಹಶೀಲ್ದಾರರುಗಳಿಗೆ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ನಂತರ ಜಿಲ್ಲಾ ಮಟ್ಟದ ತರಬೇತಿಗಾಗಿ ಚಿಕ್ಕಮಗಳೂರು ಜಿಲ್ಲೆಗೆ ನಿಯೋಜಿಸಲಾಗಿತ್ತು.

ಉಲ್ಲೇಖ(3)ರ ಅಧಿಸೂಚನೆಯಲ್ಲಿ ಶ್ರೀ ಶಶಿಕುಮಾರ್.ಎನ್, ಇವರನ್ನು ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿನ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ. ಈ ಮಧ್ಯಯಲ್ಲಿ ಸದರಿಯವರು ಸ್ಥಳ ನಿಯುಕ್ತಿ ಗೊಳಿಸಿದ ಸ್ಥಳಕ್ಕೆ ಕಾರ್ಯ ವರದಿ ಮಾಡಿಕೊಳ್ಳದೇ ಉಲ್ಲೇಖ(4) ದಿನಾಂಕ:1-12-2007ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ತಮಗೆ IPS ಸಿವಿಲ್ ಸೇವೆಗೆ ಆಯ್ಕೆಗೊಂಡಿರುವುದರಿಂದ, ಸದರಿ ತಹಶೀಲ್ದಾರ್ ಹುದ್ದೆಗೆ ಬೇಷರತ್ ರಾಜೀನಾಮೆಯನ್ನು ನೀಡಿರುವರು ಹಾಗೂ ಈ ರಾಜೀನಾಮೆಯನ್ನು ದಿನಾಂಕ:1-12-2007ರಿಂದ ಜಾರಿಗೆ ಬರುವಂತೆ ಅಂಗೀಕರಿಸಬೇಕೆಂದು ಶ್ರೀ ಶಶಿಕುಮಾರ್.ಎನ್ ಪರೀಕ್ಷಾರ್ಥ ತಹಶೀಲ್ದಾರ್ ಇವರು ಕೋರಿರುತ್ತಾರೆ.

ಸದರಿ ಪರಿವೀಕ್ಷಣಾ ತಹಶೀಲ್ದಾರರ ಬೇಷರತ್ ರಾಜೀನಾಮೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆರ್‌ಡಿ 339 ಎಎಸ್‌ಡಿ 2007, ದಿನಾಂಕ:10 ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಶಶಿಕುಮಾರ್.ಎನ್. ಪರಿವೀಕ್ಷಣಾ ತಹಶೀಲ್ದಾರ್, 2005ನೇ ತಂಡ ಇವರು ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ಸಲ್ಲಿಸಿರುವ ಬೇಷರತ್ ರಾಜೀನಾಮೆಯನ್ನು ದಿನಾಂಕ:1-12-2007ರಿಂದ ಜಾರಿಗೆ ಬರುವಂತೆ ಅಂಗೀಕರಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 140

**ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ದಾದಾರಾವ್, ತಹಶೀಲ್ದಾರ್ ನಿಯೋಜನೆ ಮೇಲೆ ಸಹಾಯಕ ನಿರ್ದೇಶಕರು, ಕೆ.ಜಿ.ಎಫ್ ಇವರನ್ನು ಅಮಾನತ್ತು ಮಾಡಿರುವ ಬಗ್ಗೆ ಘಟನೋತ್ತರ ಅನುಮೋದನೆ ನೀಡುವ ಬಗ್ಗೆ.

**ಉಲ್ಲೇಖ:** ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರ ಆದೇಶ ಸಂ:ಇಎಲ್‌ಎನ್:ಸಿಆರ್:37:2007-08,ದಿನಾಂಕ:24-12-2007

**ಪ್ರಸ್ತಾವನೆ:**

ಕೆ.ಜಿ.ಎಫ್ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಮತದಾರರ ಪಟ್ಟಿ ಪರಿಷ್ಕರಣಾ ಕಾರ್ಯವನ್ನು ಶ್ರೀ ದಾದಾರಾವ್, ಸಹಾಯಕ ನಿರ್ದೇಶಕರು, ಅನೋಪಚಾರಿಕ ಪಡಿತರ ಕೇಂದ್ರ ಸಹಾಯಕ ಮತದಾರರ ನೋಂದಾಣಾಧಿಕಾರಿ ಕೆ.ಜಿ.ಎಫ್ ಇವರು ನಿರ್ವಹಿಸಬೇಕಾಗಿದ್ದು ಸದರಿ ಕಾರ್ಯವನ್ನು ದಿನಾಂಕ:24-12-2007ರಂದು ಕೋಲಾರ ಜಿಲ್ಲಾಧಿಕಾರಿಗಳು ಪರಿಶೀಲಿಸಿದ ಸಂದರ್ಭದಲ್ಲಿ ಈ ಕೆಳಕಂಡ ಅಂಶಗಳ ಬಗ್ಗೆ ಕರ್ತವ್ಯ ಲೋಪ ಎಸಗಿರುವುದು ಮೇಲು ನೋಟಕ್ಕೆ ಕಂಡು ಬರುತ್ತದೆ ಎಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

1) ವಿಧಾನಸಭಾ ಮತದಾರರ ಪಟ್ಟಿಗಳ ಪರಿಷ್ಕರಣಾ ವಿಷಯದ ಮತಗಟ್ಟೆ ಅಧಿಕಾರಿಗಳ ನೇಮಕಾತಿಯಲ್ಲಿ ಬಹಳಷ್ಟು ವಿಳಂಬವಾಗಿರುತ್ತದೆ.

2) ಮತಗಟ್ಟೆ ಅಧಿಕಾರಿಗಳಿಗೆ ನಿಗದಿತ ಸಮಯದಲ್ಲಿ ತರಬೇತಿ ನೀಡಿರುವುದಿಲ್ಲ.

3) ಮತದಾರರ ಪಟ್ಟಿಗಳ ಪರಿಷ್ಕರಣಾ ಅಗತ್ಯ ಮಾಹಿತಿಯನ್ನು ದಿನಾಂಕ:22-12-2007 ರೊಳಗೆ ಸಿ-1, ಸಿ-2 ರಲ್ಲಿ ಸಲ್ಲಿಸಬೇಕೆಂದು ತಿಳಿಸಿದ್ದರೂ ಈ ಕೆಲಸ ನಿರ್ವಹಿಸಿರುವುದಿಲ್ಲ.

4) ಮತದಾರರ ಪಟ್ಟಿಯನ್ನು ಪರಿಷ್ಕರಣಾ ಮಾಡುವ ಸಂಬಂಧ ದಿನಾಂಕ: 02-11-2007ರಂದು ಕರಡು ಪ್ರತಿಯನ್ನು ಸಾರ್ವಜನಿಕರ ಆಕ್ಷೇಪಣೆ ಬಯಿಸಿ ಪ್ರಕಟಿಸಲಾಗಿತ್ತು. ಪ್ರಕಟಣೆ ಅನ್ವಯ 2762 ಕೋರಿಕೆಗಳು ಬಂದಿರುತ್ತವೆ. ಇವುಗಳ ವಿಲೇವಾರಿಯನ್ನು ದಿನಾಂಕ:07-12-2007ರೊಳಗೆ ಮಾಡಬೇಕಾಗಿರುತ್ತದೆ. ಆದರೆ ಈ ದಿವಸ ಅಂದರೆ ದಿನಾಂಕ: 24-12-2007ರೊಳಗೆ ಯಾವುದೇ ಅರ್ಜಿಗಳ ಬಗ್ಗೆ ಆದೇಶ ಮಾಡದೆ ಸುಳ್ಳು ಮಾಹಿತಿ ನೀಡಿರುವುದು ಇರುತ್ತದೆ. ಆದ್ದರಿಂದ ಇವರು ಪ್ರಜಾ ಪ್ರತಿನಿಧಿ ಕಾಯ್ದೆ 1950 (R.P.A. Act 1950) ಕಾಯ್ದೆಯನ್ನು ನೇರವಾಗಿ ಉಲ್ಲಂಘನೆ ಮಾಡಿರುತ್ತಾರೆ.

5) ಇವರು ಕೇಂದ್ರ ಸ್ಥಾನದಲ್ಲಿ ವಾಸವಿರುವುದಿಲ್ಲ.

6) ಮತದಾರರ ಪಟ್ಟಿ ಪರಿಷ್ಕರಣಾ ಪಟ್ಟಿ ಕಾರ್ಯದಲ್ಲಿ ಪೂರ್ಣವಾಗಿ ನಿರ್ಲಕ್ಷ್ಯ ತೋರಿಸಿರುತ್ತಾರೆ.

ಮತದಾರರ ಪಟ್ಟಿ ಪರಿಷ್ಕರಣಾ ಕಾರ್ಯವು ಮಹತ್ತರವಾದದ್ದಾಗಿದ್ದು, ಶ್ರೀ ದಾದಾರಾವ್, ಇವರು ಕರ್ತವ್ಯ ನಿರ್ವಹಣೆಯಲ್ಲಿ ಬೇಜವಾಬ್ದಾರಿ ತೋರಿಸಿ ಕರ್ತವ್ಯ ಲೋಪವೆಸಗಿರುವುದು ಕಂಡು ಬರುತ್ತದೆ. ಆದ್ದರಿಂದ ಈ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ವಹಿಸುವುದು ಅನಿವಾರ್ಯವಾಗಿದ್ದು ಉಲ್ಲೇಖ ದಿನಾಂಕ; 24-12-2007ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ ಇವರು ಶ್ರೀ ದಾದಾರಾವ್, ಸಹಾಯಕ ನಿರ್ದೇಶಕರು, ಕೆ.ಜಿ.ಎಫ್ ರವರನ್ನು ಕೆಸಿಎಸ್ (ಸಿಸಿಎ) ನಿಯಮ 10(1) ರಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಿರುತ್ತಾರೆ. ಸಕ್ಷಮ ಪ್ರಾಧಿಕಾರದಿಂದ ಘಟನೋತ್ತರ ಮಂಜುರಾತಿಯನ್ನು ಪಡೆಯುವ ಮೇರೆಗೆ ಆದೇಶ ಹೊರಡಿಸಲಾಗಿದೆ. ಅದರಂತೆ ಸರ್ಕಾರವು ದಿನಾಂಕ: 24-12-2007ರ ಆದೇಶವನ್ನು ಪರಿಶೀಲಿಸಿ ಸದರಿ ಆದೇಶಕ್ಕೆ ಘಟನೋತ್ತರ ಮಂಜೂರಾತಿ ನೀಡಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 01 ಎಡಿಇ 2008, ಬೆಂಗಳೂರು, ದಿನಾಂಕ:25ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕೋಲಾರ ಜಿಲ್ಲಾಧಿಕಾರಿಗಳ ಆದೇಶ ದಿನಾಂಕ: 24-12-2007ರಲ್ಲಿ ಶ್ರೀ ದಾದಾರಾವ್, ತಹಶೀಲ್ದಾರ್ ನಿಯೋಜನೆ ಮೇಲೆ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕಾ ಸರಬರಾಜು ಇಲಾಖೆ, ಕೆ.ಜಿ.ಎಫ್ ಇವರನ್ನು ಕೆಸಿಎಸ್‌ಆರ್ ನಿಯಮ 10(1)ರನ್ವಯ ಅಮಾನತ್ತಿನಲ್ಲಿಟ್ಟಿರುವುದನ್ನು ಘಟನೋತ್ತರ ಮಂಜೂರಾತಿ ನೀಡಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 165

**ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕೆಲವು ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಪೂರಕ ಸಿಬ್ಬಂದಿಗಳ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರಿ ಆದೇಶ ಸಂ:ಒಇ 87 ಪಿಪಿಇ 2004 ದಿನಾಂಕ:16.5.06

2 ಸರ್ಕಾರದ ಆದೇಶ ಸಂಖ್ಯೆ:ಒಇ 380 ಪಿಪಿಇ 2006 ದಿನಾಂಕ:13.11.06

3 ಸರ್ಕಾರದ ಆದೇಶ ಸಂಖ್ಯೆ:ಒಇ 162 ಪಿಪಿಇ 2006 ದಿನಾಂಕ:30.07.07

4 ಸರ್ಕಾರದ ಆದೇಶ ಸಂಖ್ಯೆ:ಒಇ 296 ಪಿಪಿಇ 2006 ದಿನಾಂಕ:18.6.07

5 ಸರ್ಕಾರದ ಆದೇಶ ಸಂಖ್ಯೆ:ಒಇ 703 ಪಿಪಿಇ 2005 ದಿನಾಂಕ: 28.6.07

6 ಸರ್ಕಾರದ ಆದೇಶ ಸಂಖ್ಯೆ:ಒಇ 819 ಪಿಪಿಇ 2005 ದಿನಾಂಕ:31.8.07

7 ಸರ್ಕಾರದ ಆದೇಶ ಸಂಖ್ಯೆ:ಒಇ 819 ಪಿಪಿಇ 2005 ದಿನಾಂಕ:14.11.07

8 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ ಸಿಶಾ–1/160/2007–08, ದಿನಾಂಕ:16.1.2008.

**ಪ್ರಸ್ತಾವನೆ:**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದ ತಃಖ್ತೆಯ ಅಂಕಣ 4 ರಲ್ಲಿ ತೋರಿಸಿರುವ ನ್ಯಾಯಾಲಯಗಳಲ್ಲಿ ಅಂಕಣ 2ರಲ್ಲಿ ಸೂಚಿಸಿರುವ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಅಂಕಣ 5ರಲ್ಲಿ ತೋರಿಸಿರುವ ಸರ್ಕಾರಿ ಆದೇಶಗಳಲ್ಲಿ ಅಂಕಣ 6ರಲ್ಲಿ ತೋರಿಸಿರುವ ಅವಧಿಯವರೆಗೆ ಸದರಿ ತಾತ್ಕಾಲಿಕ ಹುದ್ದೆಗಳನ್ನು ಕಡೆಯದಾಗಿ ಮುಂದುವರೆಸಿ ಆದೇಶಗಳನ್ನು ಹೊರಡಿಸಲಾಗಿದೆ. ಅಂಕಣ 4ರಲ್ಲಿ ತೋರಿಸಿರುವ ನ್ಯಾಯಾಲಯಗಳಲ್ಲಿ ಅಭಿಯೋಜನಾ ಇಲಾಖೆಗೆ ಸಂಬಂಧಿಸಿದ ಕಛೇರಿಗಳಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸದರಿ ಹುದ್ದೆಗಳನ್ನು ದಿ:31.3.2013ರ ವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಅಸ್ಥಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದೋ ಮೊದಲೋ ಅಲ್ಲಿಯವರೆಗೆ ಮುಂದುವರೆಸುವಂತೆ ಮೇಲೆ 8ರಲ್ಲಿ ಓದಲಾದ ದಿ:16.1.08 ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಉಲ್ಲೇಖ (1)ರಿಂದ 7ರ ವರೆಗಿನ ಆದೇಶಗಳಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲು ಕ್ರಮಾಂಕ 137 ರಿಂದ 141 ರ ವರೆಗೆ ಹುದ್ದೆಗಳ ಅವಧಿ ಜೂನ್, ಜುಲೈ, ಆಗಸ್ಟ್ ಮತ್ತು ನವೆಂಬರ್ 2008ರಲ್ಲಿ ಮುಕ್ತಾಯಗೊಳ್ಳುವುದು.

ವಿಷಯವನ್ನು ಕೂಲಂಕಶವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 32 ಪಿಪಿಇ 2008 ದಿನಾಂಕ: 16ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಅನುಬಂಧದ ತಃಖ್ತೆಯ ಅಂಕಣ 4ರಲ್ಲಿ ತೋರಿಸಿರುವ ನ್ಯಾಯಾಲಗಳಲ್ಲಿ ಅಂಕಣ 2ರಲ್ಲಿ ತೋರಿಸಿರುವ ಅಭಿಯೋಜನಾ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಏಕರೂಪವಾಗಿ ದಿನಾಂಕ:1–4–2008 ರಿಂದ 31.3.2009ರ ವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಅಸ್ಥಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2014– ನ್ಯಾಯಪರಿಪಾಲನೆ 114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 002–ಅಧಿಕಾರಿಗಳ ವೇತನ, 003–ಸಿಬ್ಬಂದಿ ವೇತನ ಈ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–7–1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು., ಕಾಫಿಪೋಸ ಮತ್ತು ಅಭಿಯೋಗಗಳು)

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.**

| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ | ಮಂಜೂರಾಗಿರುವ ಸ್ಥಳ | ಹುದ್ದೆಗಳನ್ನು ಮುಂದುವರೆಸಿದ ಅದೇಶ | ಅವಧಿ ಮುಗಿಯುವ ದಿನಾಂಕ |
|---|---|---|---|---|---|
| 01 | 02 | 03 | 04 | 05 | 06 |
| 01 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, | 01 | ಎಸಿಜೆಎಂ ನ್ಯಾಯಾಲಯ, ಬೆಂಗಳೂರು. | ಒಇ/87/ಪಿಪಿಇ/2004 ದಿನಾಂಕ 16.05.2006 | 31.03.2008 |
| 02 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಕಲೇಶಪುರ | –ಅದೇ– | –ಅದೇ– |
| 03 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆನೇಕಲ್ | –ಅದೇ– | –ಅದೇ– |
| 04 | ಬೆರಳಚ್ಚುಗಾರರ–ವ–ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹುಣಸೂರು | –ಅದೇ– | –ಅದೇ– |
| 05 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಣೇಬೆನ್ನೂರು | –ಅದೇ– | –ಅದೇ– |
| 06 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಹರಿಹರ | –ಅದೇ– | –ಅದೇ– |
| 07 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿರುಗುಪ್ಪ | –ಅದೇ– | –ಅದೇ– |
| 08 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೋಮವಾರಪೇಟೆ | –ಅದೇ– | –ಅದೇ– |
| 09 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| 10 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ)ಮತ್ತು ಜೆಎಂಎಫ್.ಸಿ. ನ್ಯಾಯಾಲಯ, ದೇವನಹಳ್ಳಿ | –ಅದೇ– | –ಅದೇ– |
| 11 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆ.ಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು | –ಅದೇ– | –ಅದೇ– |
| 12 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಜೆಎಂಎಫ್‌ಸಿ ನ್ಯಾಯಾಲಯ, ಅಂಕೋಲ | –ಅದೇ– | –ಅದೇ– |
| 13 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿನ್ಯಾಯಾಲಯ, ಬನಹಟ್ಟಿ | –ಅದೇ– | –ಅದೇ– |

| 01 | 02 | 03 | 04 | 05 | 06 |
|---|---|---|---|---|---|
| 14 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | 2ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– |
| 15 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | 2ನೇ ಎಂಎಂ ಸಂಚಾರಿ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– |
| 16 | ಸಹಾಯಕ ಸರ್ಕಾರಿ ಅಭಿಯೋಜಕರು | 08 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಾಗಡಿ, ಶಿರಾ, ಹುಣಸೂರು, ಶ್ರೀರಂಗಪಟ್ಟಣ, ಮದ್ದೂರು , ನಾಗಮಂಗಲ, ಹಿರೇಕೆರೂರು, ರಾಯಬಾಗ್ | –ಅದೇ– | –ಅದೇ– |
| 17 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿ.ಜೆ.(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಹಾಪುರ | –ಅದೇ– | –ಅದೇ– |
| 18 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆ.ಎಂಎಫ್‌ಸಿ ನ್ಯಾಯಾಲಯ, ನೆಲಮಂಗಲ | –ಅದೇ– | –ಅದೇ– |
| 19 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಎಂಎಂ ಸಂಚಾರಿ 3ನೇ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 3ನೇ ಎಂಎಂ (ಸಂ) ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 20 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತುರುವೇಕೆರೆ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ತುರುವೇಕೆರೆ | –ಅದೇ– | –ಅದೇ– |
| 21 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಆಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗುಲ್ಬರ್ಗಾ | ಒಇ 87 ಪಿಪಿಇ 2004 ದಿನಾಂಕ 16.05.2006 | 31.3.2008 |
| | ಬೆರಳಚ್ಚುಗಾರ–ವ–ಸಹಾಯಕ | 01 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗಾ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 22 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮಂಡ್ಯ | –ಅದೇ– | –ಅದೇ– |
| 23 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಶಿವಮೊಗ್ಗ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |

| 01 | 02 | 03 | 04 | 05 | 06 |
|---|---|---|---|---|---|
| 24 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 03 | 4, 5 ಮತ್ತು 6 ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| | ಬೆರಳಚ್ಚುಗಾರ – ವ ಸಹಾಯಕ | 03 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 4, 5 & 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| | ದಲಾಯತ್ | 03 | –ಅದೇ– | –ಅದೇ– | –ಅದೇ– |
| 25 | ಸರ್ಕಾರಿ ಅಭಿಯೋಜಕರು, ಕೊಪ್ಪಳ | 01 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ (ಸರ್ಕಾರಿ ಅದೇಶ ಸಂಖ್ಯೆ: ಲಾ 18 ಎಲ್‌ಸಿಇ 99(ಪಿ) ದಿನಾಂಕ 14.7.2000 ರಲ್ಲಿ ರಾಯಚೂರಿನ 1ನೇ ಅಧಿಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಕೊಪ್ಪಳಕ್ಕೆ ವರ್ಗಾಯಿಸಿದ). | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸರ್ಕಾರಿ ಅಭಿಯೋಜಕರು, ಕಛೇರಿ, ರಾಯಚೂರು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 26 | 2ನೇ ಅಧಿಕ ಸರ್ಕಾರಿ ಅಭಿಯೋಜಕರು | 01 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| | ಶೀಘ್ರಲಿಪಿಗಾರರು | 01 | 2ನೇ ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ,ಮೈಸೂರು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 27 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 28 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಎಸಿಎಂಎಂ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 29 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಪಿರಿಯಾಪಟ್ಟಣ | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಪಿರಿಯಾಪಟ್ಟಣ | –ಅದೇ– | –ಅದೇ– |
| 30 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ,ಹೊನ್ನಾಳಿ | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊನ್ನಾಳಿ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |

| | | | | | |
|---|---|---|---|---|---|
| 31 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ)ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೊರಬ | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸೊರಬ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 32 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನರಗುಂದ | ಒಇ 87 ಪಿಪಿಇ 2004 ದಿನಾಂಕ 16.05.2006 | 31.3.2008 |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ನರಗುಂದ | –ಅದೇ– | –ಅದೇ– |
| 33 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೆಗ್ಗಡದೇವನಕೋಟೆ | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೆಗ್ಗಡದೇವನಕೋಟೆ | –ಅದೇ– | –ಅದೇ– |
| 34 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೊರಟಗೆರೆ | –ಅದೇ– | –ಅದೇ– |
| | ಬೆರಳಚ್ಚುಗಾರ–ವ–ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ಕೊರಟಗೆರೆ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 35 | ಅಪರ ಸರ್ಕಾರಿ ಅಭಿಯೋಜಕರು | 01 | 22ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಪರ ಸರ್ಕಾರಿ ಅಭಿಯೋಜಕರ ಕಛೇರಿ, 22ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| 36 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | –ಅದೇ– | –ಅದೇ– |
| 37 | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ 2ನೇ ನ್ಯಾಯಾಲಯ, ಮಂಗಳೂರು | –ಅದೇ– | –ಅದೇ– |
| 38 | ಬೆರಳಚ್ಚುಗಾರ ವಾ ಸಹಾಯಕ | 02 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚನ್ನರಾಯಪಟ್ಟಣ / ನರಸಿಂಹರಾಜಪುರ. | ಒಇ/87/ಪಿಪಿಇ/ 2004 ದಿ: 16.05.2006 | 31.3.2008 |
| 39 | ಸಹಾಯಕ ಸರ್ಕಾರಿ ಅಭಿಯೋಜಕರು | 01 | 2ನೇ ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿವಮೊಗ್ಗ | –ಅದೇ– | –ಅದೇ– |
| 40 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮೂಡಿಗೆರೆ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ಮೂಡಿಗೆರೆ | –ಅದೇ– | –ಅದೇ– |

| | | | | | |
|---|---|---|---|---|---|
| 41 | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕೂಡ್ಲಗಿ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹರಪನಹಳ್ಳಿ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 2ನೇ ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಳ್ಳಾರಿ | –ಅದೇ– | –ಅದೇ– |
| 42 | ಸರ್ಕಾರಿ ಅಭಿಯೋಜಕರು | 01 | 3ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| 43 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಅಭಿಯೋಗ ಉಪನಿರ್ದೇಶಕರ ಕಛೇರಿ, ಮೈಸೂರು ವಿಭಾಗ, ಮೈಸೂರು | –ಅದೇ– | –ಅದೇ– |
| 44 | ಸಹಾಯಕ ಅಭಿಯೋಗ ನಿರ್ದೇಶಕರು | 21 | ಪ್ರತಿ ಜಿಲ್ಲೆಗೆ ಒಬ್ಬೊಬ್ಬರಂತೆ– 19 ಜಿಲ್ಲಾ ಕೇಂದ್ರಗಳಲ್ಲಿ – ಆರಕ್ಷಕ ಅಧೀಕ್ಷಕರ ಕಛೇರಿಗಳಲ್ಲಿ ಮತ್ತು ಬಿ) ಒಂದು ಹುದ್ದೆ ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ ಸಿ) ಒಂದು ಹುದ್ದೆ ಆರಕ್ಷಕ ಅಧೀಕ್ಷಕರ ಕಛೇರಿ,ಕೆ.ಜಿ.ಎಫ್ | –ಅದೇ– | –ಅದೇ– |
| 44 | ಶೀಘ್ರಲಿಪಿಗಾರರು | 21 | 19 ಜಿಲ್ಲಾ ಕೇಂದ್ರಗಳಲ್ಲಿ – ಆರಕ್ಷಕ ಅಧೀಕ್ಷಕರ ಕಛೇರಿಗಳಲ್ಲಿ ಕಾರ್ಯನಿರ್ವಹಿಸುವ ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿಗಳಿಗೆ ಪ್ರತಿಯೊಬ್ಬರಂತೆ ಬಿ) ಒಂದು ಹುದ್ದೆ ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಆರಕ್ಷಕ ಅಧೀಕ್ಷಕರ ಕಛೇರಿ, ಕೆ.ಜಿ.ಎಫ್ ಸಿ) ಒಂದು ಹುದ್ದೆ ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ,ಆರಕ್ಷಕ ಆಯುಕ್ತರ ಕಛೇರಿ ಬೆಂಗಳೂರು ನಗರ | ಒಇ/87/ಪಿಪಿಇ/ 2004 ದಿ: 16.05.2006 | 31.3.2008 |
| | ದಲಾಯತ್ | 18 | 16 ಜಿಲ್ಲಾ ಕೇಂದ್ರಗಳಲ್ಲಿ – ಆರಕ್ಷಕ ಅಧೀಕ್ಷಕರ ಕಛೇರಿಗಳಲ್ಲಿ ಕಾರ್ಯನಿರ್ವಹಿಸುವ ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿಗಳಿಗೆ ಪ್ರತಿಯೊಬ್ಬರಂತೆ ಬಿ) ಒಂದು ಹುದ್ದೆ ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಆರಕ್ಷಕ ಅಧೀಕ್ಷಕರ ಕಛೇರಿ, ಕೆ.ಜಿ.ಎಫ್ ಸಿ) ಒಂದು ಹುದ್ದೆ ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಆರಕ್ಷಕ ಆಯುಕ್ತರ ಕಛೇರಿ ಬೆಂಗಳೂರು ನಗರ | –ಅದೇ– | –ಅದೇ– |
| 45 | ವಾಹನ ಚಾಲಕರು | 02 | ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ ವಿಭಾಗ, ಬೆಳಗಾವಿ / ಗುಲ್ಬರ್ಗ ವಿಭಾಗ, ಗುಲ್ಬರ್ಗ. | –ಅದೇ– | –ಅದೇ– |

| 01 | 02 | 03 | 04 | 05 | 06 |
|---|---|---|---|---|---|
| 46 | ಸಹಾಯಕ ಸರ್ಕಾರಿ ಅಭಿಯೋಜಕರು | 04 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತಿಪಟೂರು, ರಾಯಚೂರು, ಮಂಡ್ಯ, ತುಮಕೂರು | –ಅದೇ– | –ಅದೇ– |
| 47 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಾಗೇಪಲ್ಲಿ | –ಅದೇ– | –ಅದೇ– |
| 48 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿರ್ಸಿ | –ಅದೇ– | –ಅದೇ– |
| 49 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತೀರ್ಥಹಳ್ಳಿ | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.03.2008 |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ತೀರ್ಥಹಳ್ಳಿ | –ಅದೇ– | –ಅದೇ– |
| 50 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 10 | 7ನೇಎ.ಸಿ.ಎಂಎಂ.ನ್ಯಾಯಾಲಯ, ಬೆಂಗಳೂರು ನಗರ, 8ನೇಎ.ಸಿ.ಎಂಎಂ.ನ್ಯಾಯಾಲಯ, ಬೆಂಗಳೂರು ನಗರ 9ನೇಎ.ಸಿ.ಎಂಎಂ.ನ್ಯಾಯಾಲಯ, ಬೆಂಗಳೂರು ನಗರ 10ನೇಎ.ಸಿ.ಎಂಎಂ.ನ್ಯಾಯಾಲಯ, ಬೆಂಗಳೂರು ನಗರ 11ನೇಎ.ಸಿ.ಎಂಎಂ.ನ್ಯಾಯಾಲಯ, ಬೆಂಗಳೂರು ನಗರ, 1ನೇ.ಎಂಎಂ(ಸಂ).ನ್ಯಾಯಾಲಯ, ಬೆಂಗಳೂರು ನಗರ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ ಬೆಂಗಳೂರು ವಿಭಾಗ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ,ಮೈಸೂರು ವಿಭಾಗ, ಮೈಸೂರು, (ಬೆಂಗಳುರು ನಗರ ಆರಕ್ಷಕ ಆಯುಕ್ತರ ಕಛೇರಿಗೆ ವರ್ಗಾವಣೆ ಆಗಿದೆ.) ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ ಗುಲ್ಬರ್ಗ ವಿಭಾಗ, ಗುಲ್ಬರ್ಗ. | –ಅದೇ– | –ಅದೇ– |
| 51 | ಸಹಾಯಕ ಸರ್ಕಾರಿ ಅಭಿಯೋಜಕರು | 06 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಟಿ.ನರಸೀಪುರ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನರಾಯಪಟ್ಟಣ, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮದುರ್ಗ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬಾಗಲಕೋಟೆ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭಟ್ಕಳ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ,ಹಡಗಲಿ | –ಅದೇ– | –ಅದೇ– |

| 01 | 02 | 03 | 04 | 05 | 06 |
|---|---|---|---|---|---|
| 52 | ದಲಾಯತ್ | 02 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೆಳ್ತಂಗಡಿ / ಬಂಟ್ವಾಳ | ಒಇ/87/ಪಿಪಿಇ/ 2004 ದಿ:16.05.2006 | 31.3.2008 |
| 53 | ಶೀಘ್ರಲಿಪಿಗಾರರು | 01 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ಬೆಂಗಳೂರು | –ಅದೇ– | –ಅದೇ– |
| 54 | ಜಂಟಿ ನಿರ್ದೇಶಕರು | 03 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ಬೆಂಗಳೂರು | –ಅದೇ– | –ಅದೇ– |
| | ಸರ್ಕಾರಿ ಅಭಿಯೋಜಕರು | 32 | –ಅದೇ– | –ಅದೇ– | –ಅದೇ– |
| | ಸಹಾಯಕ ಅಭಿಯೋಗ ನಿರ್ದೇಶಕರು | 02 | –ಅದೇ– | –ಅದೇ– | –ಅದೇ– |
| | ಆಡಳಿತಾಧಿಕಾರಿಗಳು | 01 | –ಅದೇ– | –ಅದೇ– | –ಅದೇ– |
| | ಅಧೀಕ್ಷಕರು | 04 | –ಅದೇ– | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 21 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 33 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 22 | –ಅದೇ– | –ಅದೇ– | –ಅದೇ– |
| | ದ್ವಿತೀಯ ದರ್ಜೆ ಸಹಾಯಕರು | 20 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 25 | –ಅದೇ– | –ಅದೇ– | –ಅದೇ– |
| | ಗ್ರೂಪ್ 'ಡಿ' | 12 | –ಅದೇ– | –ಅದೇ– | –ಅದೇ– |
| 55 | ಸರ್ಕಾರಿ ಅಭಿಯೋಜಕರು | 01 | ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಮಹಾನಗರ, ಬೆಂಗಳೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಮಹಾನಗರ, ಬೆಂಗಳೂರು | –ಅದೇ– | –ಅದೇ– |
| 56 | ದಲಾಯತ್ | 01 | ಸರ್ಕಾರಿ ಅಭಿಯೋಜಕರ ಕಛೇರಿ, ಮಡಿಕೇರಿ, (ಲಾ 59 ಎಲ್ಎಬಿ 94 ದಿ:20–11–1996ರಲ್ಲಿ ವಿರಾಜಪೇಟೆಯಿಂದ ವರ್ಗಾವಣೆಗೊಂಡ ಹುದ್ದೆ) | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| 57 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ವಿರಾಜಪೇಟೆ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ವಿರಾಜಪೇಟೆ | –ಅದೇ– | –ಅದೇ– |

| 01 | 02 | 03 | 04 | 05 | 06 |
|---|---|---|---|---|---|
| 58 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬ್ಯಾಡಗಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬ್ಯಾಡಗಿ | –ಅದೇ– | –ಅದೇ– |
| 59 | ಅಭಿಯೋಗ ಉಪನಿರ್ದೇಶಕರು | 02 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ಬೆಂಗಳೂರು | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 02 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 04 | –ಅದೇ– | –ಅದೇ– | –ಅದೇ– |
| | ದ್ವಿತೀಯ ದರ್ಜೆ ಸಹಾಯಕರು | 02 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 04 | –ಅದೇ– | –ಅದೇ– | –ಅದೇ– |
| | ದಲಾಯತ್ | 03 | –ಅದೇ– | –ಅದೇ– | –ಅದೇ– |
| 60 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚನ್ನಗಿರಿ | ಒಇ/87/ಪಿಪಿಇ/ 2004 ದಿ: 16.05.2006 | 31.3.2008 |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚನ್ನಗಿರಿ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚನ್ನಗಿರಿ | –ಅದೇ– | –ಅದೇ– |
| 61 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | 3ನೇ ಎಸಿ.ಎಂ.ಎಂ.ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| 62 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೊಪ್ಪ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕೊಪ್ಪ | –ಅದೇ– | –ಅದೇ– |
| 63 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ ತುಮಕೂರು | –ಅದೇ– | –ಅದೇ– |
| | ದಲಾಯತ್ | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ತುಮಕೂರು | –ಅದೇ– | –ಅದೇ– |
| 64 | ಸಹಾಯಕ ಸರ್ಕಾರಿ ಅಭಿಯೋಜಕರು | 01 | 2ನೇ ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀದರ್ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 2ನೇ ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀದರ್ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 2ನೇ ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀದರ್ | –ಅದೇ– | –ಅದೇ– |

| 01 | 02 | 03 | 04 | 05 | 06 |
|---|---|---|---|---|---|
| 65 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ,ಕಲಘಟಗಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕಲಘಟಗಿ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 66 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಸನಗರ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ಹೊಸನಗರ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 67 | ಸಹಾಯಕ ಸರ್ಕಾರಿ ಅಭಿಯೋಜಕರು | 01 | 2ನೇ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದಾವಣಗೆರೆ | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 2ನೇ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದಾವಣಗೆರೆ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 2ನೇ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದಾವಣಗೆರೆ | –ಅದೇ– | –ಅದೇ– |
| 68 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಬಳ್ಳಾರಿ | –ಅದೇ– | –ಅದೇ– |
| 69 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ವಿಶೇಷ ದಂಡಾಧಿಕಾರಿಗಳ ನ್ಯಾಯಾಲಯ (ಕರ್ನಾಟಕ ಸೇಲ್ಸ್ ಅಕ್ಟ್) ಬೆಂಗಳೂರು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ವಿಶೇಷ ದಂಡಾಧಿಕಾರಿಗಳ ನ್ಯಾಯಾಲಯ (ಕರ್ನಾಟಕ ಸೇಲ್ಸ್ ಅಕ್ಟ್) ಬೆಂಗಳೂರು | –ಅದೇ– | –ಅದೇ– |
| 70 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗುಂಡ್ಲುಪೇಟೆ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಗುಂಡ್ಲುಪೇಟೆ | –ಅದೇ– | –ಅದೇ– |
| 71 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕಾರ್ಕಳ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕಾರ್ಕಳ | –ಅದೇ– | –ಅದೇ– |
| 72 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಮಂಡ್ಯ | –ಅದೇ– | –ಅದೇ– |

| | | | | | |
|---|---|---|---|---|---|
| 73 | ಸರ್ಕಾರಿ ಅಭಿಯೋಜಕರು | 02 | ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,(ಎಸ್‌ಸಿ/ಎಸ್‌ಟಿ ಕಾಯ್ದೆ) ಕೋಲಾರ ಮತ್ತು ರಾಯಚೂರು | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.03.2008 |
| | ಪ್ರಥಮ ದರ್ಜೆ ಸಹಾಯಕರು | 02 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ ಮತ್ತು ರಾಯಚೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 02 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 01 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ | –ಅದೇ– | –ಅದೇ– |
| | ಅಟೆಂಡರ್ | 02 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ & ರಾಯಚೂರು | –ಅದೇ– | –ಅದೇ– |
| | ದಲಾಯತ್ | 01 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ ರಾಯಚೂರು | –ಅದೇ– | –ಅದೇ– |
| 74 | ಸರ್ಕಾರಿ ಅಭಿಯೋಜಕರು | 01 | ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, (ಎಸ್‌ಸಿ/ಎಸ್‌ಟಿ ಕಾಯ್ದೆ) ಬಿಜಾಪುರ | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ, ಬಿಜಾಪುರ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 75 | ಸರ್ಕಾರಿ ಅಭಿಯೋಜಕರು | 03 | ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, (ಭ್ರಷ್ಟಾಚಾರ ನಿರೋಧ ಕಾಯ್ದೆ 88ರಡಿ) ಬೆಂಗಳೂರು, ಮೈಸೂರು ಮತ್ತು ಮಂಗಳೂರು | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 03 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 03 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 03 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 03 | –ಅದೇ– | –ಅದೇ– | –ಅದೇ– |
| | ದಲಾಯತ್ | 02 | –ಅದೇ– | –ಅದೇ– | –ಅದೇ– |
| 76 | 3ನೇ ಅಧಿಕ ಸರ್ಕಾರಿ ಅಭಿಯೋಜಕರು | 03 | 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| 77 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಚಿಕ್ಕಮಗಳೂರು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 78 | ದಲಾಯತ್ | 01 | ಸರ್ಕಾರಿ ಅಭಿಯೋಜಕರ ಕಛೇರಿ, ಚಿತ್ರದುರ್ಗ | –ಅದೇ– | –ಅದೇ– |
| 79 | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಅರಸೀಕೆರೆ | –ಅದೇ– | –ಅದೇ– |
| 80 | ಸಹಾಯಕ ಅಭಿಯೋಗ ನಿರ್ದೇಶಕರು | 02 | ಅರಕ್ಷಕ ಆಯುಕ್ತರ ಕಛೇರಿ, ಮೈಸೂರು, ಹುಬ್ಬಳ್ಳಿ–ಧಾರವಾಡ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 02 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಮೈಸೂರು, ಹುಬ್ಬಳ್ಳಿ–ಧಾರವಾಡ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಹುಬ್ಬಳ್ಳಿ–ಧಾರವಾಡ | –ಅದೇ– | –ಅದೇ– |

| | | | | | |
|---|---|---|---|---|---|
| 81 | ಸಹಾಯಕ ಸರ್ಕಾರಿ ಅಭಿಯೋಜಕರು | 01 | 1ನೇ ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭದ್ರಾವತಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | 1ನೇ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಭದ್ರಾವತಿ | –ಅದೇ– | –ಅದೇ– |
| 82 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀಳಗಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೀಳಗಿ | –ಅದೇ– | –ಅದೇ– |
| 83 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿಗ್ಗಾಂವ್ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೀಳಗಿ | –ಅದೇ– | –ಅದೇ– |
| 84 | ಸಹಾಯಕ ಸರ್ಕಾರಿ ಅಭಿಯೋಜಕರು | 08 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಳ್ಳಕೆರೆ, ಜೇವರ್ಗಿ, ಜಗಳೂರು, ಅಫಜಲ್‌ಪುರ, ನಿಪ್ಪಾಣಿ, ಅಥಣಿ, ಮುದೊಳ ಹಾಗೂ ಮದ್ದೂರು | –ಅದೇ– | –ಅದೇ– |
| 85 | ಸರ್ಕಾರಿ ಅಭಿಯೋಜಕರು | 01 | ವಿಶೇಷ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, (ಎಸ್‌ಸಿ/ಎಸ್‌ಟಿ ಕಾಯ್ದೆ) ಗುಲ್ಬರ್ಗ | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| | ಪ್ರಥಮ ದರ್ಜೆ ಸಹಾಯಕರು | 01 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| 86 | ಸಹಾಯಕ ಗ್ರಂಥಪಾಲಕರು | 01 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ಬೆಂಗಳೂರು | –ಅದೇ– | –ಅದೇ– |
| 87 | ಜಾಡಮಾಲಿ | 01 | –ಅದೇ– | –ಅದೇ– | –ಅದೇ– |
| 88 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶೃಂಗೇರಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶೃಂಗೇರಿ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶೃಂಗೇರಿ | –ಅದೇ– | –ಅದೇ– |
| 89 | ಸಹಾಯಕ ಸರ್ಕಾರಿ ಅಭಿಯೋಜಕರು –ವಾ– ಸಹಾಯಕ ಸರ್ಕಾರಿ ವಕೀಲರು | 07 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಂಡೂರು, ಹಗರಿಬೊಮ್ಮನಹಳ್ಳಿ, ಪಾಂಡವಪುರ, ಯಳಚಿದೂರು, ಆಲೂರು, ಮುಂಡರಗಿ, ಹಾಗೂ ಗುಡಿಬಂಡೆ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 06 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಂಡೂರು, ಹಗರಿಬೊಮ್ಮನಹಳ್ಳಿ, ಪಾಂಡವಪುರ, ಯಳಚಿದೂರು, ಆಲೂರು, ಹಾಗೂ ಗುಡಿಬಂಡೆ | –ಅದೇ– | –ಅದೇ– |
| | ದಲಾಯತ್ | 03 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಂಡೂರು, ಪಾಂಡವಪುರ ಹಾಗೂ ಮುಂಡರಗಿ, | –ಅದೇ– | –ಅದೇ– |

| | | | | | |
|---|---|---|---|---|---|
| 90 | 2ನೇ ಅಧಿಕ ಸರ್ಕಾರಿ ಅಭಿಯೋಜಕರು | 01 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| | ಅಧೀಕ್ಷಕರು | 01 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 91 | ಸರ್ಕಾರಿ ಅಭಿಯೋಜಕರು | 01 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸರ್ಕಾರಿ ಅಭಿಯೋಜಕರ ಕಛೇರಿ, ಬಾಗಲಕೋಟೆ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 92 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಬೀದರ್ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 93 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | 3ನೇ ಅಧಿಕ ಸಿಜೆ ಮತ್ತು ಸಿಜೆಎಂ ನ್ಯಾಯಾಲಯ, ಧಾರವಾಡ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 3ನೇ ಅಧಿಕ ಸಿಜೆ ಮತ್ತು ಸಿಜೆಎಂ ನ್ಯಾಯಾಲಯ, ಧಾರವಾಡ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 94 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 05 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಅನೇಕಲ್, ರಾಯಭಾಗ, ಗೌರಿಬಿದನೂರು, ಕೊಳ್ಳೇಗಾಲ ಹಾಗೂ ಚಾಮರಾಜ ನಗರ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 04 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು ಕಛೇರಿ ಅನೇಕಲ್, ಗೌರಿಬಿದನೂರು, ಕೊಳ್ಳೇಗಾಲ.ಚಾಮರಾಜನಗರ | –ಅದೇ– | –ಅದೇ– |
| 95 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡಗೊಡು | ಒಇ 87 ಪಿಪಿಇ 2004 ದಿನಾಂಕ 16.05.2006 | 31.03.2008 |
| | ಬೆರಳಚ್ಚುಗಾರ ವಾ ಸಹಾಯಕ | | ಸಹಾಯಕ ಸರ್ಕಾರಿ ಅಭಿಯೋಜಕರು ಕಛೇರಿ, ಮುಂಡಗೊಡು | –ಅದೇ– | –ಅದೇ– |
| 96 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಅರಕ್ಷಕ ಅಧೀಕ್ಷಕರ ಕಛೇರಿ ಗದಗ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಗದಗ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 97 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಅರಕ್ಷಕ ಅಧೀಕ್ಷಕರ ಕಛೇರಿ ಹಾವೇರಿ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಹಾವೇರಿ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 98 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಆರಕ್ಷಕ ಅಧೀಕ್ಷಕರ ಕಛೇರಿ, ಬಾಗಲಕೋಟೆ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ,ಬಾಗಲಕೋಟೆ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |

| | | | | | |
|---|---|---|---|---|---|
| 99 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಆರಕ್ಷಕ ಅಧೀಕ್ಷಕರ ಕಛೇರಿ, ದಾವಣಗೆರೆ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ದಾವಣಗೆರೆ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 100 | ಸಹಾಯಕ ಅಭಿಯೋಗ ನಿರ್ದೇಶಕರು | 01 | ಆರಕ್ಷಕ ಅಧೀಕ್ಷಕರ ಕಛೇರಿ, ಕೊಪ್ಪಳ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಕೊಪ್ಪಳ | –ಅದೇ– | –ಅದೇ– |
| 101 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಹಿವಿ) ಮತ್ತು ಸಿಜೆಎಂ ನ್ಯಾಯಾಲಯ, ಗದಗ | –ಅದೇ– | –ಅದೇ– |
| 102 | ಸರ್ಕಾರಿ ಅಭಿಯೋಜಕರು | 01 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ | –ಅದೇ– | –ಅದೇ– |
| | ಅಧೀಕ್ಷಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ, ಗದಗ | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| 103 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಹಿವಿ) ಮತ್ತು ಸಿಜೆಎಂ ನ್ಯಾಯಾಲಯ, ಹಾವೇರಿ | ಒಇ 87 ಪಿಪಿಇ 2004 ದಿನಾಂಕ 16.05.2006 | 31.3.2008 |
| | ಅಧೀಕ್ಷಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ ಹಾವೇರಿ | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| 104 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಹಿವಿ) ಮತ್ತು ಸಿಜೆಎಂ ನ್ಯಾಯಾಲಯ, ಬಾಗಲಕೋಟೆ | –ಅದೇ– | –ಅದೇ– |
| | ಅಧೀಕ್ಷಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ, ಬಾಗಲಕೋಟೆ | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| 105 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಹಿವಿ) ಮತ್ತು ಸಿಜೆಎಂ ನ್ಯಾಯಾಲಯ, ದಾವಣಗೆರೆ | –ಅದೇ– | –ಅದೇ– |
| 106 | ಸರ್ಕಾರಿ ಅಭಿಯೋಜಕರು | 01 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ದಾವಣಗೆರೆ | –ಅದೇ– | –ಅದೇ– |
| | ಅಧೀಕ್ಷಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ ದಾವಣಗೆರೆ | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| 107 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಹಿವಿ) ಮತ್ತು ಸಿಜೆಎಂ ನ್ಯಾಯಾಲಯ ಕೊಪ್ಪಳ | –ಅದೇ– | –ಅದೇ– |
| | ಅಧೀಕ್ಷಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ ಕೊಪ್ಪಳ | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |

| | | | | | |
|---|---|---|---|---|---|
| 108 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಚನ್ನಪಟ್ಟಣ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚನ್ನಪಟ್ಟಣ | –ಅದೇ– | –ಅದೇ– |
| 109 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಕೆ.ಜಿ.ಎಫ್ | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.3.2008 |
| | ಬೆರಳಚ್ಚುಗಾರ ವಾ ಸಹಾಯಕ | | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕೆ.ಜಿ.ಎಫ್ | –ಅದೇ– | –ಅದೇ– |
| 110 | 3ನೇ ಅಧಿಕ ಸರ್ಕಾರಿ ಅಭಿಯೋಜಕರು | 01 | 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | 3ನೇ ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ ಬೆಳಗಾವಿ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 111 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಳಬಾಗಿಲು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ಮುಳಬಾಗಿಲು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 112 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ,ದಾಂಡೇಲಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ದಾಂಡೇಲಿ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 113 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಅರಕಲಗೂಡು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಅರಕಲಗೂಡು | –ಅದೇ– | –ಅದೇ– |
| 114 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ, ಮಾಲೂರು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮಾಲೂರು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 115 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯಕನಕಪುರ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕನಕಪುರ | –ಅದೇ– | –ಅದೇ– |
| 116 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ 3ನೇ ನ್ಯಾಯಾಲಯ ಕನಕಪುರ | ಒಇ/87/ಪಿಪಿಇ/ 2004 ದಿನಾಂಕ 16.05.2006 | 31.03.2008 |
| 117 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಮೊಳಕಾಲ್ಮೂರು | –ಅದೇ– | –ಅದೇ– |
| 118 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ,ಶಿಡ್ಲಘಟ್ಟ | –ಅದೇ– | –ಅದೇ– |
| 119 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ,ಹಿರಿಯೂರು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ಹಿರಿಯೂರು | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ,ಹಿರಿಯೂರು | –ಅದೇ– | –ಅದೇ– |

| | | | | | |
|---|---|---|---|---|---|
| 120 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ ಚಿತ್ರದುರ್ಗ | –ಅದೇ– | –ಅದೇ– |
| 121 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಹೊಳಲ್ಕೆರೆ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಳಲ್ಕೆರೆ | –ಅದೇ– | –ಅದೇ– |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಳಲ್ಕೆರೆ | –ಅದೇ– | –ಅದೇ– |
| 122 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ, ಶ್ರೀನಿವಾಸಪುರ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶ್ರೀನಿವಾಸಪುರ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 123 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಬೇಲೂರು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೇಲೂರು | –ಅದೇ– | –ಅದೇ– |
| 124 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ,ಹೊಸಕೋಟೆ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಸಕೋಟೆ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 125 | 2ನೇ ಅಧಿಕ ಸರ್ಕಾರಿ ಅಭಿಯೋಜಕರು | 01 | 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಗಳೂರು | ಒಇ 87 ಪಿಪಿಇ 2004 ದಿನಾಂಕ 16.05.2006 | 31.03.2008 |
| | ಶೀಘ್ರಲಿಪಿಗಾರರು | 01 | 2ನೇ ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ,ಮಂಗಳೂರು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 126 | ಅಧಿಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಹಾಸನ | –ಅದೇ– | –ಅದೇ– |
| | ದಲಾಯತ್ | 01 | ಅಧಿಕ ಸರ್ಕಾರಿ ಅಭಿಯೋಜಕರ ಕಛೇರಿ, ಹಾಸನ | –ಅದೇ– | –ಅದೇ– |
| 127 | 3ನೇ ಹೆಚ್ಚುವರಿ ಸರ್ಕಾರಿ ಅಭಿಯೋಜಕರು | 01 | 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ತುಮಕೂರು | ಒಇ 380 ಪಿಪಿಇ 2006 ದಿ:13–11–2006 | 31.03.2008 |
| | ಅಧೀಕ್ಷಕರು | 01 | 3ನೇ ಹೆಚ್ಚುವರಿ ಸರ್ಕಾರಿ ಅಭಿಯೋಜಕರ ಕಛೇರಿ ತುಮಕೂರು | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 01 | –ಅದೇ– | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| | ಬೆರಳಚ್ಚುಗಾರರು | 01 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 01 | –ಅದೇ– | –ಅದೇ– | –ಅದೇ– |
| | ಜಾವಾನ | 01 | –ಅದೇ– | –ಅದೇ– | –ಅದೇ– |

| | | | | | |
|---|---|---|---|---|---|
| 128 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಹೆಚ್ಚುವರಿ ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಬೈಲಹೊಂಗಲ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಹೆಚ್ಚುವರಿ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೈಲಹೊಂಗಲ | –ಅದೇ– | –ಅದೇ– |
| 129 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಹೆಚ್ಚುವರಿ ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಖಾನಾಪುರ | –ಅದೇ– | –ಅದೇ– |
| 130 | ಸರ್ಕಾರಿ ಅಭಿಯೋಜಕರು | 01 | ವಿಶೇಷ ಎನ್‌ಡಿಪಿಎಸ್ ನ್ಯಾಯಾಲಯ, ಬೆಂಗಳೂರು | ಒಇ 380 ಪಿಪಿಇ 2006 ದಿ:13–11–2006 | 31.03.2008 |
| | ಪ್ರಥಮ ದರ್ಜೆ ಸಹಾಯಕರು | 01 | ಸರ್ಕಾರಿ ಅಭಿಯೋಜಕರ ಕಛೇರಿ, ವಿಶೇಷ ಎನ್‌ಡಿಪಿಎಸ್ ನ್ಯಾಯಾಲಯ, ಬೆಂಗಳೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 01 | –ಅದೇ– | –ಅದೇ– | –ಅದೇ– |
| 131 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಹೆಚ್ಚುವರಿ ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಹಾವೇರಿ | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಹೆಚ್ಚುವರಿ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹಾವೇರಿ | –ಅದೇ– | –ಅದೇ– |
| 132 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ,ಸಂಕೇಶ್ವರ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 133 | ಸರ್ಕಾರಿ ಅಭಿಯೋಜಕರು | 30 | ಶೀಘ್ರ ವಿಲೇವಾರಿ ನ್ಯಾಯಾಲಯ | –ಅದೇ– | –ಅದೇ– |
| 134 | ಸರ್ಕಾರಿ ಅಭಿಯೋಜಕರು | 01 | ಚರ್ಚ ಬಾಂಬ್ ಸ್ಫೋಟ/ ನಕಲಿ ಛಾಪಾ ಕಾಗದ/ಕಂಬಾಲಪಲ್ಲಿ ಪ್ರಕರಣ, ವಿಶೇಷ ನ್ಯಾಯಾಲಯ ಬೆಂಗಳೂರು | –ಅದೇ– | –ಅದೇ– |
| | ಪ್ರಥಮ ದರ್ಜೆ ಸಹಾಯಕರು | 03 | ವಿಶೇಷ ನ್ಯಾಯಾಲಯ ಸರ್ಕಾರಿ ಅಭಿಯೋಜಕರ ಕಛೇರಿ ಬೆಂಗಳೂರು | –ಅದೇ– | –ಅದೇ– |
| | ಶೀಘ್ರಲಿಪಿಗಾರರು | 03 | –ಅದೇ– | –ಅದೇ– | –ಅದೇ– |
| | ಅಟೆಂಡರ್ | 03 | –ಅದೇ– | –ಅದೇ– | –ಅದೇ– |
| 135 | ಆಡಾಳಿತಾಧಿಕಾರಿ | 01 | | –ಅದೇ– | –ಅದೇ– |
| 136 | ಲೆಕ್ಕ ಪತ್ರ ಅಧೀಕ್ಷಕರು | 01 | | –ಅದೇ– | –ಅದೇ– |

| | | | | | |
|---|---|---|---|---|---|
| 137 | ಶೀಘ್ರಲಿಪಿಗಾರರು | 01 | ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ | ಒಇ 162 ಪಿಪಿಇ 2006 ದಿ:30–07–2007 | 29–7–2008 |
| | ಬೆರಳಚ್ಚುಗಾರರು | 08 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಜಗಳೂರು, ಚಳ್ಳಕೆರೆ, ಜೇವರ್ಗಿ, ಅಫಜಲಪುರ ನಿಪ್ಪಾಣಿ. ಅಥಣಿ .ಮದ್ದೂರು ಹಾಗೂ ಮುಧೋಳ | –ಅದೇ– | –ಅದೇ– |
| | ದಲಾಯತ್ | 08 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಜಗಳೂರು, ಚಳ್ಳಕೆರೆ, ಜೇವರ್ಗಿ, ಅಫಜಲಪುರ.ನಿಪ್ಪಾಣಿ, ಅಥಣಿ, ಮದ್ದೂರು ಹಾಗೂ ಮುಧೋಳ | –ಅದೇ– | –ಅದೇ– |
| | ದಲಾಯತ್ | 01 | ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,ಧಾರವಾಡ | –ಅದೇ– | –ಅದೇ– |
| 138 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಸಿಂಧನೂರು | ಒಇ 296 ಪಿಪಿಇ 2006 ದಿ:18–06–2007 | 17–6–2008 |
| | ಬೆರಳಚ್ಚುಗಾರ ವಾ ಸಹಾಯಕ | 01 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಂಧನೂರು | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| 139 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಮೂಡಬಿದರೆ | ಒಇ 703 ಪಿಪಿಇ 2005 ದಿ:28–06–2007 | 27–6–2008 |
| | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮೂಡಬಿದರೆ | –ಅದೇ– | –ಅದೇ– |
| | ದಲಾಯತ್ | 01 | –ಅದೇ– | –ಅದೇ– | –ಅದೇ– |
| | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಅಧಿಕ ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಚಿಕ್ಕಮಗಳೂರು | –ಅದೇ– | –ಅದೇ– |
| | ಬೆರಳಚ್ಚುಗಾರ ವಾ ಸಹಾಯಕ | 01 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚಿಕ್ಕಮಗಳೂರು | –ಅದೇ– | –ಅದೇ– |
| | ದಲಾಯತ್ | 01 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚಿಕ್ಕಮಗಳೂರು | –ಅದೇ– | –ಅದೇ– |
| 140 | ಸಹಾಯಕ ಸರ್ಕಾರಿ ಅಭಿಯೋಜಕರು | 01 | ಸಿಜೆ(ಕಿವಿ) ಮತ್ತು ಜೆಎಂಎಫಸಿ ನ್ಯಾಯಾಲಯ ಬಂಗಾರಪೇಟೆ | ಒಇ 819 ಪಿಪಿಇ2 005 ದಿ:31–08–2007 | 30–8–2008 |
| 141 | ಬೆರಳಚ್ಚುಗಾರ ವಾ ಸಹಾಯಕ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬಂಗಾರಪೇಟೆ | ಒಇ 819 ಪಿಪಿಇ 2005 ದಿ:14–11–2007 | 13–11–2008 |
| | ದಲಾಯತ್ | 01 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬಂಗಾರಪೇಟೆ | –ಅದೇ– | –ಅದೇ– |

ಸರ್ಕಾರದ ಆದೇಶ ಸಂಖ್ಯೆ ಒಇ 32 ಪಿಪಿಇ 2008, ಬೆಂಗಳೂರು ದಿನಾಂಕ:16–04–2008

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾಫಿಪೋಸ ಮತ್ತು ಅಭಿಯೋಗ, ಕಾನೂನು ಮತ್ತು ಸುವ್ಯವಸ್ಥೆ)

ಪಿ.ಆರ್. 668

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಅಂಗವಿಕಲರ ಕಲ್ಯಾಣ ಇಲಾಖೆಯ ಆರ್ಥಿಕ ಸಹಯೋಗದೊಂದಿಗೆ ನಡೆಸಲಾಗುತ್ತಿರುವ ವಿದ್ಯಾರ್ಥಿಗಳ ತರಬೇತಿ ವಸತಿ ನಿಲಯಗಳ ತಪಾಸಣೆ ಕುರಿತು– ಶ್ರೀ ವೈ.ಬಿ.ಶಿಂದೆ ಸಹಾಯಕ ನಿರ್ದೇಶಕರು, ಹಾಗೂ ಶ್ರೀ ಎಂ.ಎನ್.ನಾಯಕ್, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ನಡೆಸುವ ಬಗ್ಗೆ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು, ಇವರ ಪತ್ರ ಸಂಖ್ಯೆ: ಜಿ.ಪ.ರಾ/13/ಸಿಸಿಎ/2007–08/ 2820 ದಿ: 12–10–2007.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ರವರ ಕಛೇರಿಯ ಆದೇಶ ಸಂಖ್ಯೆ: ನಿಸಿಶಿಪ/15/07–08 ದಿ: 6–10–2007.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 545 ಎಸ್‌ಜೆಡಿ 2007 ದಿ: 23–11–2007
4. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 545 ಎಸ್‌ಜೆಡಿ 2007 ದಿ: 30–1–2008.
5. ಕಾರಣ ಕೇಳುವ ನೋಟೀಸಿಗೆ ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು (ಅಮಾನತ್ತಿನಲ್ಲಿರುವವರು) ಇವರು ದಿ: 16–2–2008 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ
6. ಕಾರಣ ಕೇಳುವ ನೋಟೀಸಿಗೆ ಶ್ರೀ ಎಂ.ಎನ್.ನಾಯಕ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ರಾಯಚೂರು (ಅಮಾನತ್ತಿನಲ್ಲಿರುವವರು) ಇವರು ದಿ: 21–2–2008 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ
7. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು, ಇವರ ಆದೇಶ ಸಂಖ್ಯೆ: ಜಿ.ಪ.ರಾ/13/ಸಿಸಿಎ/2007–08/ ದಿ: 10–1–2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 12–10–2007 ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು ಜಿಲ್ಲೆ, ಇವರು ಪ್ರಸ್ತಾವನೆ ಸಲ್ಲಿಸಿ, ರಾಯಚೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾದ ಶ್ರೀ ಎ.ಅನೀಸ್‌ರಾಜ್‌ರವರು ದಿ: 6–7–2007 ರಂದು ಸುಮಾರು ಬೆಳಗ್ಗೆ 10.00 ರಿಂದ 11.00 ಗಂಟೆಯ ವೇಳೆಯಲ್ಲಿ ರಾಯಚೂರು ಜಿಲ್ಲೆಯ ಶ್ರೀ ರೇವಣಸಿದ್ದೇಶ್ವರ ಸಂಸ್ಥೆ ಬೀದರ್ ಶಾಖಾವತಿಯಿಂದ ಬೋಳಮಾನ ದೊಡ್ಡಿ ರಸ್ತೆಯಲ್ಲಿ ಖಾಸಗಿ ಮನೆಯೊಂದರಲ್ಲಿ ನಡೆಸುತ್ತಿರುವ ಪ್ರಗತಿ ಪುರುಷ ಅಂಗವಿಕಲ ಶಿಕ್ಷಣಾರ್ಥಿಗಳ ವಸತಿ ನಿಲಯಕ್ಕೆ ಭೇಟಿ ನೀಡಿದಾಗ ಕೇವಲ 16 ಶಿಕ್ಷಣಾರ್ಥಿಗಳು ಮಾತ್ರ ಹಾಜರಿದ್ದು ಒಂದು ಕೋಣೆಯಲ್ಲಿ 3–4 ಹಳೆಯ ನಿಷ್ಪ್ರಯೋಜಕ ಗಣಕ ಯಂತ್ರಗಳನ್ನು ಇಡಲಾಗಿದ್ದು, ಅದೇ ರೀತಿಯಾಗಿ ಐ.ಬಿ. ಕಾಲೋನಿಯಲ್ಲಿ ಸಂಕಲ್ಪ ಸಂಸ್ಥೆ ರಾಯಚೂರುರವರಿಂದ ನಡೆಸಲ್ಪಡುತ್ತಿರುವ ಅಂಗವಿಕಲ ಮಹಿಳೆಯರ ವಸತಿ ಶಾಲೆಯಲ್ಲಿಯೂ ಸಹ ನೊಂದಾಯಿತ 24 ಶಿಕ್ಷಣಾರ್ಥಿಗಳ ಪೈಕಿ ಕೇವಲ 6 ಅಭ್ಯರ್ಥಿಗಳು ಇದ್ದು, 3 ಹಳೆಯ ಗಣಕ ಯಂತ್ರಗಳನ್ನು ಇಟ್ಟಿದ್ದು, ಪರಿಶೀಲನಾ ಸಮಯದಲ್ಲಿ ಶ್ರೀ ವೈ.ಬಿ.ಶಿಂಧೆ ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಮತ್ತು ಶ್ರೀ ಎಂ.ಎನ್.ನಾಯಕ್ ಜಿಲ್ಲಾ ಅಂಗವಿಕಲೆ ಹಾಗೂ ಹಿರಿಯ ನಾಗರಿಕರ ಕಲ್ಯಾಣಾಧಿಕಾರಿಗಳು, ರಾಯಚೂರು ಇವರುಗಳು ಉಪಸ್ಥಿತರಿದ್ದು, ಅವರುಗಳು ಈ ವಸತಿ ನಿಲಯಗಳ ದುಸ್ಥಿತಿ ಕುರಿತು ವಿವರಣೆ ನೀಡುವಲ್ಲಿ ವಿಫಲರಾಗಿರುತ್ತಾರೆಂದು, ಮುಂದುವರೆದು ಸದರಿ ವಿದ್ಯಾರ್ಥಿ ನಿಲಯಗಳಿಗೆ ಅನುಕ್ರಮವಾಗಿ ಸರ್ಕಾರದಿಂದ ಬಿಡುಗಡೆಯಾಗಿರುವ ರೂ.1.00 ಲಕ್ಷ ಹಾಗೂ ರೂ. 0.50 ಲಕ್ಷ ಅನುದಾನವನ್ನು ಸಮರ್ಪಕವಾಗಿ ಮೇಲ್ವಿಚಾರಣೆ ಮಾಡದೆ ಅನುದಾನವನ್ನು ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಶ್ರೀ ರೇವಣಸಿದ್ದೇಶ್ವರ ಟ್ರಸ್ಟ್ ಹಾಗೂ ಸಂಕಲ್ಪ ಸಂಸ್ಥೆ, ರಾಯಚೂರು, ಇವರೊಂದಿಗೆ ಶಾಮೀಲಾಗಿ ಸರ್ಕಾರಿ ಹಣದ ದುರುಪಯೋಗದಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವ ಹಿನ್ನೆಲೆಯಲ್ಲಿ, ಶ್ರೀ ಎಂ.ಎನ್.ನಾಯಕ್ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ರಾಯಚೂರು, ಇವರನ್ನು ಈಗಾಗಲೇ ಅಮಾನತ್ತಿನಲ್ಲಿರಿಸಲಾಗಿದೆಯೆಂದು, ಇನ್ನುಳಿದಂತೆ ಶ್ರೀ ವೈ.ಬಿ.ಶಿಂಧೆ ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಿ ಶ್ರೀ ವೈ.ಬಿ.ಶಿಂಧೆ ಮತ್ತು ಶ್ರೀ ಎಂ.ಎನ್.ನಾಯಕ್ ಇವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ, ಮೇಲೆ (3) ರಲ್ಲಿ ಓದಲಾದ ದಿ: 23–11–2007 ರ ಆದೇಶದಲ್ಲಿ ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿಯಿಟ್ಟು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 10(1)(ಎ) ರನ್ವಯ ಅಮಾನತ್ತಿನಲ್ಲಿಡಲಾಗಿದೆ.

ಸರ್ಕಾರವು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ವರದಿ/ಶಿಫಾರಸ್ಸಿನ ಅನ್ವಯ ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಮತ್ತು ಶ್ರೀ ಎಂ.ಎನ್.ನಾಯಕ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ರಾಯಚೂರು ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿ ಮೇಲೆ (4) ರಲ್ಲಿ ಓದಲಾದ ದಿ: 30–1–2008 ರಂದು ಸದರಿ ಅಧಿಕಾರಿಗಳಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 11 ರಡಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿ: 16–2–2008 ರಂದು ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು (ಅಮಾನತ್ತಿನಲ್ಲಿರುವವರು) ಹಾಗೂ ಮೇಲೆ ಕ್ರಮ ಸಂಖ್ಯೆ(6) ರಲ್ಲಿ ಓದಲಾದ ದಿ: 21–2–2008 ರಂದು ಶ್ರೀ ಎಂ.ಎನ್.ನಾಯಕ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ರಾಯಚೂರು (ಅಮಾನತ್ತಿನಲ್ಲಿರುವವರು) ಇವರುಗಳು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರಗಳಲ್ಲಿ ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದು, ಅವರ ಉತ್ತರಗಳು ಸಮರ್ಪಕವಾಗಿಲ್ಲವೆಂದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಈ ಬಗ್ಗೆ ಸತ್ಯಾಸತ್ಯೆತೆಯನ್ನು ಕಂಡು ಹಿಡಿಯಲು ಸದರಿ ಅಧಿಕಾರಿಗಳ ವಿರುದ್ಧ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರ ಮೇರೆಗೆ ಇಲಾಖಾ ವಿಚಾರಣೆಯನ್ನು ನಡೆಸು ಉದ್ದೇಶಿಸಿ ಶ್ರೀ ಕುಮಾರಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬಳ್ಳಾರಿ ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀ ಮುನಿರೆಡ್ಡಿ ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 545 ಎಸ್‌ಜೆಡಿ 2007, ಬೆಂಗಳೂರು ದಿ: 17ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ವೈ.ಬಿ.ಶಿಂಧೆ, ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು (ಅಮಾನತ್ತಿಲ್ಲಿರುವವರು) ಮತ್ತು ಶ್ರೀ ಎಂ.ಎನ್.ನಾಯಕ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ರಾಯಚೂರು (ಅಮಾನತ್ತಿನಲ್ಲಿರುವವರು) ಇವರುಗಳು ಎಸಗಿರುವ ಕರ್ತವ್ಯ ಲೋಪಗಳ ಬಗ್ಗೆ ಸತ್ಯಾಸತ್ಯೆತೆಯನ್ನು ಕಂಡು ಹಿಡಿಯಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 132 ರ ಮೇರೆಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದೆ. ಈ ಪ್ರಕರಣದಲ್ಲಿ ಶ್ರೀ ಕುಮಾರಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸಂಗನ ಬಸಯ್ಯ ಬಿಲ್ಡಿಂಗ್ ಶಾಸ್ತ್ರಿ ನಗರ, 2ನೇ ಅಡ್ಡರಸ್ತೆ, ಬಳ್ಳಾರಿ 583102– ಇವರನ್ನು ಇದೇ ನಿಯಮ 11(2) ರ ಮೇರೆಗೆ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀ ಮುನಿರೆಡ್ಡಿ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರನ್ನು ಇದೇ ನಿಯಮಾವಳಿಗಳ ನಿಯಮ 11 (5) ರ ಮೇರೆಗೆ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಪ್ರಾರಂಭಿಸಿದ 3 ತಿಂಗಳ ಒಳಗಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.659

**ಆರ್.ಎಂ.ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ವಿಷಯ:** ಶ್ರೀ ವೈ.ಕೃಷ್ಣಪ್ಪ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ (ಹಾಲಿ ನಿಧನ ಹೊಂದಿರುತ್ತಾರೆ), ಇವರ ವಿರುದ್ಧ ಹೂಡಲಾದ ಶಿಸ್ತು ಕ್ರಮವನ್ನು ಕೈಬಿಡುವ ಕುರಿತು– ಆದೇಶ

**ಓದಲಾಗಿದೆ:**

7 ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಶಿವಮೊಗ್ಗ, ರವರ ಕಛೇರಿಯ ಪತ್ರ ಸಂಖ್ಯೆ: ಆಭಿ/14/ವಿವ/77/2002–03 ದಿ: 17–1–2003.

8 ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 439 ಎಸ್‌ಜೆಡಿ 2004 ದಿ: 5/13–01–2005.

9 ಶ್ರೀ ವೈ.ಕೃಷ್ಣಪ್ಪ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿವಮೊಗ್ಗ (ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ), ಇವರ ಲಿಖಿತ ಹೇಳಿಕೆ ಸಂಖ್ಯೆ:ಉನಿಕೊ/ಲೆಕ್ಕ–3/ಮಮಇ/ನೋಟೀಸ್/04–05/3459 ದಿ: 29–1–2005.

10 ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಶಿವಮೊಗ್ಗ, ರವರ ಕಛೇರಿಯ ಪತ್ರ ಸಂಖ್ಯೆ: ಜಿಪಂಶಿ/ಅಭಿ–14/ವಿವ/77/02–03 ದಿ: 22–2–2006

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ:1–7–2003 ರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಕಾರ್ಯಾಲಯ, ಶಿವಮೊಗ್ಗ, ಇವರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಎಡಬ್ಲ್ಯೂಎಲ್/102 ಎಸ್.ಟಿ.ಡಿ./81 ದಿ: 3/9–6–1981 ರ ಪ್ರಕಾರ ಒಂದು ಬಾರಿಗೆ ರೂ. 7500–00 ಹಾಲಿ ಒಟ್ಟು 25,000–00 ಕ್ಕಿಂತ ಮೀರದಂತೆ ಖರೀದಿಸಲು ಮಾತ್ರ ಅಧಿಕಾರವಿರುತ್ತದೆಂದು ಆದರೆ ಶ್ರೀ ವೈ.ಕೃಷ್ಣಪ್ಪ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿವಮೊಗ್ಗ (ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ), ಇವರು ಸರ್ಕಾರದ ಆದೇಶವನ್ನು ಉಲ್ಲಂಘಿಸಿ ನಿಯಮ ಪಾಲಿಸದೆ ಅಧಿಕಾರ ದುರುಪಯೋಗ ಪಡಿಸಿಕೊಂಡು ಶಿವಮೊಗ್ಗ ಜಿಲ್ಲೆಯ 6 ತಾಲ್ಲೂಕುಗಳಿಗೆ ಪ್ರಿಸ್ಟೋಸೈನ್ ಬೋರ್ಡ್‌ಗಳನ್ನು (ಕಛೇರಿಯ ಪ್ರಗತಿಯ ಸಾಧನೆ ಅಂಕಿ–ಅಂಶಗಳನ್ನು ಪ್ರಸೂರ ಪಡಿಸುವ ಸಾಮಾಗ್ರಿ) ಪ್ರತೀ ಬೋರ್ಡ್‌ಗೆ ರೂ. 6598–00 ರಂತೆ ಖರೀದಿಸಿರುವುದಾಗಿ, ಇದರಿಂದ ಸರ್ಕಾರದ ಆದೇಶ ಕಡೆಗಾಣಿಸಿರುತ್ತಾರೆಂದು ಆದುದರಿಂದ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿ ಅನುಬಂಧ–1 ರಿಂದ 4 ರವರೆಗೆ ಆರೋಪ ಪಟ್ಟಿಯನ್ನು ತಯಾರಿಸಿ ಕಳುಹಿಸಿರುತ್ತಾರೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಶಿಫಾರಸ್ಸಿನಂತೆ ಶ್ರೀ ವೈ.ಕೃಷ್ಣಪ್ಪ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿವಮೊಗ್ಗ, ಹಾಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿ, ಆರೋಪಣಾ ಪಟ್ಟಿಯನ್ನು (ಅನುಬಂಧ 1–4 ರೊಂದಿಗೆ) ಕಾರಣ ಕೇಳುವ ನೋಟೀಸಿನೊಂದಿಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 5/13–01–2005 ರಂದು ಶ್ರೀ ವೈ.ಕೃಷ್ಣಪ್ಪ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ ರವರಿಗೆ ಜಾರಿ ಮಾಡಲಾಗಿದೆ.

ಶ್ರೀ ವೈ.ಕೃಷ್ಣಪ್ಪ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ ರವರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 29–01–2005 ರ ಲಿಖಿತ ಹೇಳಿಕೆಯಲ್ಲಿ ಸರ್ಕಾರಿ ಆದೇಶದ ಸಂಖ್ಯೆ: ಎಸ್‌ಡಬ್ಲ್ಯೂಎಲ್: 102:ಎಸ್‌ಜೆಡಿ :1981 ದಿ: 3:9–6–1981 ಪವರ್ ನಂ.9 ರಲ್ಲಿ ಒಂದು ಬಾರಿಗೆ ರೂ. 7500–00 ಗಳನ್ನು ಮಂಜೂರು ಮಾಡಲು ಅಧಿಕಾರವಿರುತ್ತದೆ. ಶಿವಮೊಗ್ಗ ಜಿಲ್ಲೆಯಲ್ಲಿ 6 ತಾಲ್ಲೂಕುಗಳು ಇದ್ದ ಪ್ರಯುಕ್ತ, ಒಂದು ತಾಲ್ಲೂಕಿಗೆ ಒಂದು ಬಾರಿಗೆ ರೂ.7500–00 ಗಳಂತೆ ಒಂದು ವರ್ಷದಲ್ಲಿ ರೂ.2500–00 ಗಳಿಗೆ ಮಂಜೂರು ಮಾಡಬಹುದೆಂದು ಅರ್ಥೈಸಿಕೊಂಡು ಸರ್ಕಾರ ನೀಡಿರುವ ವಿಶೇಷ ಅಧಿಕಾರದ ಮೇರೆಗೆ ಪ್ರತಿ ತಾಲ್ಲೂಕಿಗೆ ರೂ.2500–00 ಗಳಿಗೆ ಮೀರದಂತೆ ಮಂಜೂರಾತಿ ಆದೇಶವನ್ನು ನೀಡಲಾಗಿತ್ತೆಂದು, ಆದರೆ ದಿ: 15–1–2002 ರಂದು ನಡೆದ ಸಾಮಾನ್ಯ ಸಭೆಯಲ್ಲಿ ಖರೀದಿಯ ಮಂಜೂರಾತಿ ಆದೇಶದ ಬಗ್ಗೆ ಆಕ್ಷೇಪಣೆ ವ್ಯಕ್ತಪಡಿಸಿದ್ದರಿಂದ ಖರೀದಿಯ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲಾಗಿತಲ್ಲದೆ ಮಂಜೂರಾತಿಯ ಆದೇಶ ಪ್ರಕ್ರಿಯೆಯನ್ನು ಸ್ಥಗಿತ ಗೊಳಿಸಲಾಯಿತಲ್ಲದೆ ಮಂಜೂರಾತಿಯ ಆದೇಶವನ್ನು ರದ್ದುಪಡಿಸಿರುವ ಬಗ್ಗೆ ಆಯಾ ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ತಿಳಿಸಿ ಖರೀದಿಯ ಪ್ರಕ್ರಿಯೆಯನ್ನು ಕೈ ಬಿಡುವಂತೆ ಸೂಚಿಸಲಾಗಿರುತ್ತದೆ. ಈ ಬಗ್ಗೆ ಯಾವುದೇ ರೀತಿಯ ವೆಚ್ಚವನ್ನು ಭರಿಸಲಾಗಿರುವುದಿಲ್ಲ ನನ್ನ ಅಧಿಕಾರ ವ್ಯಾಪ್ತಿ ಮೀರಿ ಖರೀದಿಗೆ ಹಣ ದುರುಪಯೋಗ ಪಡಿಸಿಕೊಂಡಿರುವುದಿಲ್ಲವೆಂದು ಹಾಗೂ ಸರ್ಕಾರದ ಬೊಕ್ಕಸಕ್ಕೆ ಯಾವುದೇ ನಷ್ಟ ಉಂಟು ಮಾಡಿರುವುದಿಲ್ಲವೆಂದು, ಆದುದರಿಂದ ಅವರ ವಿರುದ್ಧ ಹೊರಿಸಿರುವ ಆರೋಪಗಳು ಸತ್ಯಕ್ಕೆ ದೂರವಾಗಿರುವ ಕಾರಣ ಸದರಿ ಪ್ರಕರಣವನ್ನು ಕೈಬಿಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ:22–2–2006 ರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಕಾರ್ಯಾಲಯ, ಶಿವಮೊಗ್ಗ, ಇವರ ಪತ್ರದಲ್ಲಿ ಪ್ರಿಸ್ಟೋಸೈನ್ ಬೋರ್ಡ್ ಖರೀದಿ ಸಂಬಂಧ, ಖರೀದಿ ಮಂಜೂರಾತಿ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಿ, ಪ್ರಸ್ಟೋಸೈನ್ ಬೋರ್ಡ್ ಖರೀದಿ ಸ್ಥಗಿತಗೊಳಿಸಲಾಗಿದ್ದು, ಯಾವುದೇ ವೆಚ್ಚ ಭರಿಸಿರುವುದಿಲ್ಲವಾದ್ದರಿಂದ ನಷ್ಟ ಉಂಟಾಗಿಲ್ಲವೆಂದು ಹಾಗೂ ಶ್ರೀ ವೈ.ಕೃಷ್ಣಪ್ಪ, ಹಿಂದಿನ ಸಹಾಯಕ ನಿರ್ದೇಶಕರು (ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ) ದಿ: 11–6–2005 ರಂದು ನಿಧನ ಹೊಂದಿರುತ್ತಾರೆಂದು ವರದಿ ಮಾಡಿರುತ್ತಾರೆ. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ವೈ.ಕೃಷ್ಣಪ್ಪ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿವಮೊಗ್ಗ (ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ), ಇವರ ವಿರುದ್ಧದ ಆರೋಪವು ಸಾಬೀತಾಗಿಲ್ಲದಿರುವುದನ್ನು ಗಮನಿಸಿ ಹಾಗೂ ಸದರಿಯವರು ಈಗಾಗಲೇ

ನಿಧನ ಹೊಂದಿರುವ ಹಿನ್ನೆಲೆಯಲ್ಲಿ, ಸದರಿಯವರ ವಿರುದ್ಧ ಪ್ರಸ್ತಾಪಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ಅವರನ್ನು ದೋಷಮುಕ್ತರೆಂದು ಪರಿಗಣಿಸಲು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 439 ಎಸ್‌ಜೆಡಿ 2004, ಬೆಂಗಳೂರು ದಿನಾಂಕ: 19ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ವೈ.ಕೃಷ್ಣಪ್ಪ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಶಿವಮೊಗ್ಗ (ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೋಲಾರ) (ಹಾಲಿ ನಿಧನ ಹೊಂದಿರುತ್ತಾರೆ), ಇವರ ವಿರುದ್ಧ ಪ್ರಸ್ತಾಪಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಅವರನ್ನು ದೋಷಮುಕ್ತರೆಂದು ಪರಿಗಣಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.657

**ಆರ್.ಎಂ.ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ವಿಷಯ:** ಶ್ರೀ ರಾಮಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಕನಕಪುರ, ರಾಮನಗರ ಜಿಲ್ಲೆ ಇವರನ್ನು ಲೋಕಾಯುಕ್ತರ ಟ್ರ್ಯಾಪ್ ಪ್ರಕರಣದಲ್ಲಿ ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ:** ಅಪರ ಪೊಲೀಸ್ ಮಹಾನಿರ್ದೇಶಕರು, ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಬಿಡಿ–53 /ಸಿ.ಆರ್–2/2007. ರಾಮನಗರ

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು, ಫಿರ್ಯಾದುದಾರರಾದ ಶ್ರೀ ಪಿ.ಶಿವಣ್ಣ ಬಿನ್ ಪಾಪಯ್ಯ, ಕೃಷ್ಣಬೋವಿದೊಡ್ಡಿ ವಾಸಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ರವರು ರಾಮನಗರ ಲೋಕಾಯುಕ್ತ ಠಾಣೆಗೆ ಹಾಜರಾಗಿ ಅವರ ಪತ್ನಿ ಶ್ರೀಮತಿ ಜಿ. ಚಂದ್ರಮ್ಮ ರವರು ಅಂಗನವಾಡಿ ಕಾರ್ಯಕರ್ತೆಯ ಕೆಲಸಕ್ಕೆ ಅರ್ಜಿ ಹಾಕಿದ್ದು, ಸದರಿ ಅಂಗನವಾಡಿ ಕಾರ್ಯಕರ್ತೆಯ ಕೆಲಸ ಕೊಡಲು ಶ್ರೀ ರಾಮಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕನಕಪುರ ರವರು ರೂ.15000/– ಲಂಚ ಸ್ವೀಕರಿಸಿದ್ದು, ಪುನ: ರೂ. 5,000/– ಲಂಚ ಕೊಟ್ಟಲ್ಲಿ ಮಾತ್ರ ಅಂಗನವಾಡಿ ಕಾರ್ಯಕರ್ತೆಯ ಕೆಲಸ ನೀಡುವುದಾಗಿ ಲಂಚಕ್ಕೆ ಒತ್ತಾಯಿಸಿದ್ದು, ಫಿರ್ಯಾದುದಾರರಾದ ಶ್ರೀ ಪಿ. ಶಿವಣ್ಣ ಬಿನ್ ಪಾಪಯ್ಯ ರವರು ಲಂಚದ ಹಣ ಕೊಡಲು ಇಷ್ಟವಿಲ್ಲದ ಕಾರಣ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಲೋಕಾಯುಕ್ತ ಪೊಲೀಸ್ ಠಾಣೆ, ರಾಮನಗರ ರವರನ್ನು ಕೋರಿರುತ್ತಾರೆಂದು, ಸದರಿ ದೂರನ್ನು ಆಧರಿಸಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂ: 2/2007 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀ ರಾಮಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕನಕಪುರ, ರಾಮನಗರ ಜಿಲ್ಲೆ ಇವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀಯುತರನ್ನು ಕೂಡಲೇ ಅಮಾನತ್ತಿನಲ್ಲಿ ಇರಿಸಲು ಲೋಕಾಯುಕ್ತರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಲೋಕಾಯುಕ್ತರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಮಇ 35 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 30ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ರಾಮಪ್ಪ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, ಇವರನ್ನು ಕರ್ನಾಟಕ ನಾಗರಿಕ ಸೇವಾ(ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 10(1)(ಎ) ಮೇರೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ. ಹಾಗೂ ಇವರ ಧಾರಣಾಧಿಕಾರ (lien) ವನ್ನು ಅಂಗವಿಕಲರ ಕಲ್ಯಾಣ ಇಲಾಖೆಗೆ ಸ್ಥಳಾಂತರಿಸಿ, ಸದರಿಯವರ ಧಾರಣಾಧಿಕಾರವನ್ನು ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ಕೊಪ್ಪಳ ಹುದ್ದೆಗೆ ಸ್ಥಳಾಂತರಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಂ.ಚಂದ್ರಮ್ಮ**

ಪಿ.ಆರ್. 396

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ವಿಷಯ:** ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆ –ವಿಚಾರಣಾಧಿಕಾರಿಗಳ ವರದಿ–ಆದೇಶ

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ : ಮಮಇ 489 ಎಸ್.ಜೆ.ಡಿ2003 ದಿನಾಂಕ 6.12.2004.

2 ಶ್ರೀ ಎನ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಪತ್ರ ದಿ: 6.07.2005.

3 ಸರ್ಕಾರದ ಆದೇಶ ಸಂಖ್ಯೆ : ಮಮಇ 489 ಎಸ್.ಜೆ.ಡಿ 2003 ದಿನಾಂಕ 31.05.2006.

4 ಶ್ರೀ ಪಿ.ಎಸ್.ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವಿಚಾರಣಾಧಿಕಾರಿಗಳಾಗಿ ಸಲ್ಲಿಸಿರುವ ವರದಿ ದಿ: 20.9.2006.

5 ಶ್ರೀ ರಮೇಶ್ ಪಿ.ಭರಸ್ಕಳೆ, ಇವರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ದಿ: 06.08.2007

6 ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು, ಇವರ ಲಿಖಿತ ಹೇಳಿಕೆ ದಿ:16.08.2007

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ದಿನಾಂಕ: 7.03.2004 ರ ಅದೇಶದಲ್ಲಿ ಶ್ರೀ ರಮೇಶ್ ಪಿ.ಭರಸ್ಕಳೆ, ಹಿಂದಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ, ಪ್ರಸ್ತುತ ಉಪನಿರ್ದೇಶಕರು (ಸುಧಾರಣೆ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಬಾಗಲಕೋಟೆ ಜಿಲ್ಲೆಯಲ್ಲಿ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳು ಕೆಳಕಂಡಂತಿರುತ್ತದೆ.

1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನಾಲಯದ ದಿ: 19.3.1988 ರ ಸುತ್ತೋಲೆಯನ್ವಯ ಉಪನಿರ್ದೇಶಕರುಗಳಿಗೆ ಅಂಗನವಾಡಿ ಕಾರ್ಯಕರ್ತೆಯರನ್ನು ನೇಮಕ ಮಾಡಲು ಅಧಿಕಾರವಿರುವುದಿಲ್ಲ ಆದರೆ ಶ್ರೀ ರಮೇಶ್ ಪಿ. ಭರಸ್ಕಳೆ ಉಪನಿರ್ದೇಶಕರು ದಿ: 17.03.1988 ರ ಸುತ್ತೋಲೆಯನ್ನು ಉಲ್ಲಂಘಿಸಿ ಮುಧೋಳ್ ತಾಲ್ಲೂಕಿನ, ನಂದ ಗ್ರಾಮದ ಅಂಗನವಾಡಿ ಕಾರ್ಯಕರ್ತೆಯಾದ ಶ್ರೀಮತಿ ದಾನಮ್ಮ ಚಂದ್ರಶೇಖರಪ್ಪ ಬೆಟ್ಟೆಗೇರಿ, ಇವರನ್ನು ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಿರುತ್ತಾರೆ.

2. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನಾಲಯದ ದಿ: 17.3.1988 ರ ಸುತ್ತೋಲೆಯನ್ವಯ ಒಂದು ತಾಲ್ಲೂಕಿನಲ್ಲಿ 5 ಕ್ಕಿಂತ ಮೇಲ್ಪಟ್ಟಿದ್ದ ಖಾಲಿ ಹುದ್ದೆಗಳನ್ನು ಪ್ರಕಟಣೆ ಮೂಲಕ ತುಂಬಬೇಕಾಗುತ್ತದೆ. ಆದರೆ ಶ್ರೀ ರಮೇಶ್ ಪಿ. ಭರಸ್ಕಳೆ ಉಪನಿರ್ದೇಶಕರು ಸದರಿ ಸುತ್ತೋಲೆಯನ್ನು ಉಲ್ಲಂಘಿಸಿ ಮುಧೋಳ್ ತಾಲ್ಲೂಕಿನಲ್ಲಿ ಖಾಲಿ ಇರುವ 3 ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳನ್ನು ಯಾವುದೇ ಪ್ರಕಟಣೆ ಕೊಟ್ಟು ತುಂಬದೆ ಒಂದೇ ತಿಂಗಳಲ್ಲಿ ಬೇರೆ ಬೇರೆ ದಿನಾಂಕಗಳಲ್ಲಿ ತುಂಬಿ ಕರ್ತವ್ಯಚ್ಯುತಿ ಎಸಗಿರುತ್ತಾರೆ.

3. ಖಜ್ಜಿಡೋಣೆ ಗ್ರಾಮದ ಕಾರ್ಯಕರ್ತೆ ಹುದ್ದೆಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಯ ಶಿಫಾರಸ್ಸು ಇಲ್ಲದೆ ದಿ: 27–2–2004 ರಂದು ನೇಮಕಾತಿ ಆದೇಶ ಹೊರಡಿಸಿ ಶ್ರೀಮತಿ ತುಳಸವ್ವ ಇವರನ್ನು ನೇಮಕಾತಿ ಮಾಡಿ ಕರ್ತವ್ಯಚ್ಯುತಿ ಎಸಗಿರುತ್ತಾರೆ.

4 14 ಜನ ಅಭ್ಯರ್ಥಿಗಳಲ್ಲಿ ಶ್ರೀಮತಿ ವಿಶಾಲಕ್ಷಿ ಸಂಗನ ಬಸಪ್ಪ ಕಂದಗಲ್ಲ ಇವರು ಇತರೆ ಅಭ್ಯರ್ಥಿಗಳಿಂದ ಕಡಿಮೆ ಅಂಕ ಪಡೆದಿದ್ದರು ಸಹ ಅವರನ್ನು ನೇಮಕಾತಿ ಮಾಡಿ ಕರ್ತವ್ಯಚ್ಯುತಿ ಎಸಗಿರುತ್ತಾರೆ.

5. ಸ್ಥಳೀಯರಲ್ಲವೆಂದು ಗ್ರಾಮ ಪಂಚಾಯತ್‌ರವರು ಪತ್ರ ನೀಡಿದ್ದರೂ ಸಹ ಹಿಂದಿನ ಮಾನ್ಯ ಸಚಿವರು ಹೇಳಿದರೆಂದು ಹಲಗಲಿ ಗ್ರಾಮದವರಲ್ಲದ ಶ್ರೀಮತಿ ಸುಧಾ ಮಲ್ಲಪ್ಪ ಪಾಟೀಲ ಇವರನ್ನು ನೇಮಕಾತಿ ಮಾಡಿ ಕರ್ತವ್ಯಚ್ಯುತಿ ಎಸಗಿರುತ್ತಾರೆ.

6. ಐದು ಕಡತಗಳಲ್ಲಿ ನೇಮಕಾತಿ ಆದೇಶದ ಮೂಲ ಪ್ರತಿಗಳನ್ನು ಇರಿಸದೆ ಆದೇಶದ ಪ್ರತಿಗಳನ್ನು ಮಾತ್ರ ಇರಿಸಿ ಕರ್ತವ್ಯಚ್ಯುತಿ ಎಸಗಿರುತ್ತಾರೆ.

7. ಶ್ರೀಮತಿ ಸುಧಾ ಮಲ್ಲಪ್ಪ ಪಾಟೀಲ ಇವರು ಮನವಿ ಅರ್ಜಿ ದಿ: 26.02.2004 ರಂದು ಸಲ್ಲಿಸಿದ್ದು ಸದರಿ ಮನವಿ ಅರ್ಜಿ ಮೇಲೆ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಮುಧೋಳ ಇವರು ದಿ: 01.03.2004 ಎಂದು ಚಿಕ್ಕ ರುಜು ಮಾಡಿರುತ್ತಾರೆ. ಆ ವೇಳೆಗೆ ಚುನಾವಣಾ ನೀಡಿ ಸಂಹಿತೆ ಜಾರಿಯಲ್ಲಿದ್ದು, ಆದರೂ ಕೂಡ ಸದರಿ ಅರ್ಜಿ ಕಛೇರಿಯಲ್ಲಿ ಸ್ವೀಕೃತವಾಗುವುದಕ್ಕೆ ಮುಂಚೆಯೇ ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು ಇವರು ದಿ: 27.02.2004 ರಂದು ನಮೂದಿಸಿ ಚುನಾವಣೆ ನೀತಿ ಸಂಹಿತೆಯನ್ನು ಉಲ್ಲಂಘನೆ ಮಾಡಿ ಕರ್ತವ್ಯಲೋಪವೆಸಗಿರುತ್ತಾರೆ.

8. ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು ಇವರು ಚುನಾವಣಾ ಸಂಹಿತೆ ಜಾರಿಯಲ್ಲಿದ್ದರೂ ಸಹ ಶ್ರೀ ಎಸ್.ಎನ್. ಮುಚಖಂಡಿಮಠ, ಮಹಿಳಾ ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಹುನಗುಂದ ಇವರನ್ನು ದಿ: 06.03.2004 ರಂದು ಬಾದಾಮಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಗೆ ನಿಯೋಜಿಸಿ, ಶ್ರೀಮತಿ ಮಾತಂಗೆವ್ವ ಮಾದರ, ಜವಾನ, ಇವರನ್ನು ದಿ: 20.03.2004 ರಂದು, ಉಪನಿರ್ದೇಶಕರ ಕಾರ್ಯಾಲಯ. ಬಾಗಲಕೋಟೆಯಿಂದ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ ಬೀಳಗಿಗೆ ನಿಯೋಜಿಸಿ ಮತ್ತು ಶ್ರೀ ಅಶೋಕ್ ಕೆಲವಾಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಇವರನ್ನು ದಿ: 26.03.2004 ರಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಹುದ್ದೆಯಲ್ಲಿ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಿ ಕರ್ತವ್ಯಲೋಪವೆಸಗಿರುತ್ತಾರೆ.

9. ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರವರು ಕೇಂದ್ರ ಸ್ಥಾನದಲ್ಲಿ ಸೌಲಭ್ಯಗಳು ಇದ್ದಾಗ ಕಛೇರಿ ವಾಹನವನ್ನು ದುರುಪಯೋಗಪಡಿಸಿಕೊಂಡು ಸರ್ಕಾರದ ಆದೇಶ ಸಂಖ್ಯೆ : ಹಇ 05 ಸನೀತ 2003 ದಿ: 25.08.2003 ರನ್ವಯ ವಿಮಾನ ಪ್ರಯಾಣ ಕೈಗೊಳ್ಳಲು ಅರ್ಹತೆ ಇಲ್ಲದಿದ್ದರೂ ಸರ್ಕಾರದ ಹಣವನ್ನು ಖರ್ಚು ಮಾಡಿ ವಿಮಾನ ಟಿಕೆಟ್‌ನ್ನು ಮುಂಗಡ ಪಡೆಯಲು ವಾಹನವನ್ನು ಬಾಗಲಕೋಟೆಯಿಂದ ಬೆಳಗಾವಿಗೆ ಕಳುಹಿಸಿ ಟಿಕೆಟ್‌ನ್ನು ತರಲು ಮರಳಿ ನಿಗಧಿತ ದಿನಾಂಕದಂದು ಮತ್ತೆ ವಾಹನವನ್ನು ತೆಗೆದುಕೊಂಡು ವಾಹನವನ್ನೇ ಬಾಗಲಕೋಟೆಯಿಂದ ಬೆಳಗಾವಿಗೆ ಕೊಂಡೊಯ್ದು, ಮುಂಗಡ ಟಿಕೆಟ್‌ನ ಹಣವನ್ನು ತಮ್ಮ ಹಂತದಲ್ಲಿಯೇ ಹಲವಾರು ಬಾರಿ ಮುಂಗಡವಾಗಿ ಪಡೆದುಕೊಂಡು ವಿಮಾನ ಪ್ರಯಾಣ ಮಾಡಿ ಹಣ ದುರುಪಯೋಗ ಪಡಿಸಿಕೊಂಡು ಕರ್ತವ್ಯಚ್ಯುತಿ ಎಸಗಿರುತ್ತಾರೆ.

10. ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು ಇವರು ಸರ್ಕಾರದ ಆದೇಶ ಸಂಖ್ಯೆ ; ಎಫ್‌ಡಿ 2 ಬಿಇಎಂ 2003 ದಿ; 29.09.2003 ರನ್ವಯ ಆರ್ಥಿಕ ಮಿತವ್ಯಯ ವಿಧಿಸಿ ನಿಷೇದಿಸಿದ್ದರೂ ಸಹ ಪೀಠೋಪಕರಣ ಮತ್ತು ಮುದ್ರಣ ಮಾಡುವ ಕಾರ್ಯಗಳಿಗೆ ಸದರಿ ಆದೇಶವನ್ನು ಉಲ್ಲಂಘಿಸಿ ಜಿಲ್ಲಾ ಪಂಚಾಯತ್‌ನ ಪೂರ್ವಾನುಮತಿ ಪಡೆಯದೆ ಪೀಠೋಪಕರಣ ಮತ್ತು ಮುದ್ರಣಗಳನ್ನು ಖರೀದಿಸಿ ಕರ್ತವ್ಯಚ್ಯುತಿ ಎಸಗಿರುತ್ತಾರೆ.

ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು, ಇವರು ಬಾಗಲಕೋಟೆ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಇವರ ಅಧಿಕಾರ ವ್ಯಾಪ್ತಿ ಮೀರಿ ಹಣ ದುರುಪಯೋಗ ಹಾಗೂ ಸಾರ್ವತ್ರಿಕ ಚುಣಾವಣೆಯ ಸಂದರ್ಭದಲ್ಲಿ ಸಿಬ್ಬಂದಿ ನೇಮಕಾತಿ/ವರ್ಗಾವಣೆಗಳನ್ನು ಮಾಡಿ ಚುನಾವಣಾ ನೀತಿ ಸಂಹಿತೆಯನ್ನು ಉಲ್ಲಂಘಿಸಿ ಕರ್ತವ್ಯ ಲೋಪವೆಸಗಿರುವ ಕುರಿತು ಇವರ ವಿರುದ್ಧ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11 ರ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಪ್ರಕರಣದಲ್ಲಿ ಶ್ರೀ ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ಇದೇ ನಿಯಮಾವಳಿಗಳ ನಿಯಮ 11(2) ರ ಮೇರೆಗೆ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಜಂಟಿ ನಿರ್ದೇಶಕರು (ಆಡಳಿತ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಧಾನ ಕಛೇರಿ, ಬೆಂಗಳೂರು ಇವರನ್ನು ಇದೇ ನಿಯಮಾವಳಿಗಳ ನಿಯಮ 11(5) ರ ಮೇರೆಗೆ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯಾದ ಶ್ರೀ ಎನ್. ಅನಂತಮೂರ್ತಿ ಇವರು ವಿಚಾರಣೆ ದಿ: 15–5–2005 ರಂದು ಆರೋಪಿತ ಅಧಿಕಾರಿ ಶ್ರೀ ರಮೇಶ್ ಪಿ.ಭರಸ್ಕಳೆ ಇವರು ವಿಚಾರಣಾಧಿಕಾರಿಗಳಾದ ತನ್ನ ನಿಷ್ಪಕ್ಷಪಾತದ ಬಗ್ಗೆ ವಿನಾಕಾರಣ ಆಕ್ಷೇಪಿಸಿದ್ದು, ಈ ವರ್ತನೆ ಖಂಡನಾರ್ಹವಾಗಿದ್ದು, ಮುಂದಿನ ವಿಚಾರಣೆ ದಿನಗಳಲ್ಲಿ ಇದೇ ರೀತಿಯ ವರ್ತನೆಯನ್ನು ಪ್ರದರ್ಶಿಸುವ ಸಾಧ್ಯತೆ ಇರುವ ಕಾರಣ ತಮ್ಮ ನೇಮಕಾತಿಯನ್ನು ರದ್ದುಗೊಳಿಸಬೇಕೆಂದು ಕೋರಿರುತ್ತಾರೆ. ಶ್ರೀ ಎನ್.ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ ಮೇಲೆ (3) ರಲ್ಲಿ ಓದಲಾದ ದಿನಾಂಕ 31.05.2006 ರ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ ಮಮಇ 489 ಎಸ್.ಜೆ.ಡಿ 2004 ದಿ: 06.04.2004 ನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರ ನಿಯಮ 11(22)ರೊಂದಿಗೆ ಓದಿಕೊಂಡು ನಿಯಮ 11 (2) ರನ್ವಯ ಶ್ರೀ ಎನ್.ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಬದಲಿಗೆ ಶ್ರೀ ಟಿ.ಎಸ್.ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11 (5)(ಸಿ) ರನ್ವಯ " ಜಂಟಿ ನಿರ್ದೇಶಕರು (ಆಡಳಿತ) " ಬದಲಿಗೆ " ಜಂಟಿ ನಿರ್ದೇಶಕರು/ಅಪರ ನಿರ್ದೇಶಕರು (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ತದನಂತರ ವಿಚಾರಣಾಧಿಕಾರಿಯವರನ್ನು ಬದಲಾಯಿಸುವ ನಿಟ್ಟಿನಲ್ಲಿ ಸರ್ಕಾರದ ದಿ: 31.05.2006 ರ ಆದೇಶದನ್ವಯ ಶ್ರೀ ಟಿ.ಎಸ್.ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರು ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ನಡೆಸಿ ಮೇಲೆ (4) ರಲ್ಲಿ ಓದಲಾದ ದಿ: 20.09.2006 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಈ ಪ್ರಕರಣದಲ್ಲಿನ ಆರೋಪಿ ಅಧಿಕಾರಿಯ ಮಂಡನಾಧಿಕಾರಿಯಾದ ಅಪರ ನಿರ್ದೇಶಕರು (ಆಡಳಿತ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ವಿರುದ್ಧ ವಿಚಾರಣಾ ಪ್ರಾರಂಭವಾದಾಗಿನಿಂದ ಅಸಮಧಾನ ಹೊಂದಿದ್ದು, ಅನುಚಿತವಾಗಿ ಕೂಡ ವರ್ತಿಸಿರುವುದಾಗಿ ಕಂಡುಬಂದಿದ್ದು, ದಿ: 12.09.2006 ರಂದು ಅಂತಿಮ ಮಟ್ಟದಲ್ಲಿ ಆರೋಪಿಗಳ ವಾದವನ್ನು ವಿಚಾರಾಣಾಧಿಕಾರಿಗಳು ಆಲಿಸುವಾಗ ಮಂಡನಾಧಿಕಾರಿಗಳು ಗೈರುಹಾಜರಾಗಿದ್ದು, ಅವರ ವಾದವನ್ನು ಮಂಡಿಸಿರುವುದಿಲ್ಲ. ಮಂಡನಾಧಿಕಾರಿಗಳ ವಾದಗಳ ಪುಷ್ಟೀಕರಣವಿಲ್ಲದೆ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ವಿಚಾರಣಾ ವರದಿಯ ಪ್ರತಿಯೊಂದನ್ನು ಮೇಲೆ (5) ರಲ್ಲಿ ಓದಲಾದ ದಿನಾಂಕ 6.08.2007 ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸಿನೊಂದಿಗೆ ಆಪಾದಿತ ಅಧಿಕಾರಿಯಾದ ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು, ಇವರಿಗೆ ಜಾರಿಮಾಡಲಾಗಿದ್ದು, ಪ್ರತಿಯಾಗಿ ಆಪಾದಿತ ಅಧಿಕಾರಿಯಾದ ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು ಮೇಲೆ (6) ರಲ್ಲಿ ಓದಲಾದ ದಿ: 16.08.2007 ರಂದು ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ಹಾಗೂ ಆಪಾದಿತ ಅಧಿಕಾರಿಗಳು ನೀಡಿರುವ ಲಿಖಿತ ಹೇಳಿಕೆ ಹಾಗೂ ಇತರೆ ಸಾಕ್ಷಿ ಪುರಾವೆಗಳನ್ನು ಸಮಗ್ರವಾಗಿ ಪರಿಶೀಲಿಸಲಾಗಿ ಈ ಕೆಳಕಂಡ ಅಂಶಗಳು ವ್ಯಕ್ತವಾಗುತ್ತದೆ.

1. ಆರೋಪ 1ರ ಬಗ್ಗೆ:– ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನಾಲಯದ ಸುತ್ತೋಲೆ ದಿ; 17.03.1988 ರ ಪ್ರಕಾರ ಒಂದು ತಾಲ್ಲೂಕಿನಲ್ಲಿ 5 ಕ್ಕಿಂತ ಮೇಲ್ಪಟ್ಟು ಇದ್ದ ಖಾಲಿ ಹುದ್ದೆಗಳನ್ನು ಪ್ರಕಟಣೆ ಮೂಲಕ ತುಂಬಬೇಕಾಗುತ್ತದೆ. ಆದರೆ ಆರೋಪಿತ ಅಧಿಕಾರಿಯು ಇದಕ್ಕೆ ತದ್ವಿರುದ್ಧವಾಗಿ ಲಿಖಿತ ವಾದದಲ್ಲಿ ದಿ: 17.03.1988 ರ ಸುತ್ತೋಲೆ ಹೊರಡಿಸಿರುವುದಿಲ್ಲವೆಂದು ಹೇಳಿರುತ್ತಾರೆ. ಅದುದರಿಂದ ಇವರ ಮೇಲಿನ ಈ ಆರೋಪವು ಸಾಬೀತಾಗುತ್ತದೆ.

2. ಆರೋಪ 2 ರ ಬಗ್ಗೆ:– ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನಾಲಯದ ದಿ: 17.3.1988 ರ ಸುತ್ತೋಲೆಯನ್ವಯ ಒಂದು ತಾಲ್ಲೂಕಿನಲ್ಲಿ 5 ಕ್ಕಿಂತ ಮೇಲ್ಪಟ್ಟಿದ್ದ ಖಾಲಿ ಹುದ್ದೆಗಳನ್ನು ಪ್ರಕಟಣೆ ಮೂಲಕ ತುಂಬಬೇಕಾಗುತ್ತದೆ. ಆದರೆ 3 ಅಂಗನವಾಡಿ ಕಾರ್ಯಕರ್ತೆಯರಾದ ಶ್ರೀಮತಿ ಕಲಾವತಿ, ಶ್ರೀಮತಿ ಸುಧಾ ಮಲ್ಲಪ್ಪ ಮತ್ತು ಶ್ರೀಮತಿ ದಾನಮ್ಮ ಚಂದ್ರಶೇಖರ್ ಇವರನ್ನು ದಿ: 4–2–2004, 27–2–2004 ಮತ್ತು 27–2–2004 ರ ಆದೇಶದಲ್ಲಿ ನೇಮಿಸಲಾಗಿದೆ. ಅದುದರಿಂದ ಆರೋಪಿತ ಅಧಿಕಾರಿಯ ಮೇಲಿನ ಈ ಆರೋಪವು ಸಾಬೀತಾಗುತ್ತದೆ.

3. ಆರೋಪ 3 ರ ಬಗ್ಗೆ:– ಖಜ್ಜಿಡೋಣೆ ಗ್ರಾಮದ ಕಾರ್ಯಕರ್ತೆ ಹುದ್ದೆಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಶಿಫಾರಸ್ಸು ಮಾಡಿದ ಅಭ್ಯರ್ಥಿಯನ್ನು ಆಯ್ಕೆ ಮಾಡದೆ, ಜಿಲ್ಲಾ ಪಂಚಾಯತ್ ಅನುಮೋದನೆ ಪಡೆಯದೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಯ ಶಿಫಾರಸ್ಸು ಇಲ್ಲದೆ ದಿ: 27–2–2004 ರಂದು ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು ಸ್ವತಃ ನೇಮಕಾತಿ ಆದೇಶ ಹೊರಡಿಸಿ ಶ್ರೀಮತಿ ತುಳಸವ್ವ ಇವರನ್ನು ನೇಮಕಾತಿ ಮಾಡಿಕೊಂಡಿದ್ದು, ತಮ್ಮ ವಿವರಣೆಯಲ್ಲಿ ಆರೋಪ ಎಸಗಿಲ್ಲವೆಂದು ಸಾಬೀತು ಮಾಡದೆ ತಮಗೆ ಅಧಿಕಾರವಿದೆ ಎಂದು ಹೇಳಿರುವುದರಿಂದ ಇವರ ಮೇಲಿನ ಈ ಆರೋಪವು ಸಾಬೀತಾಗುತ್ತದೆ.

4. ಆರೋಪ 4 ರ ಬಗ್ಗೆ:– 14 ಜನ ಅಭ್ಯರ್ಥಿಗಳಲ್ಲಿ ಶ್ರೀಮತಿ ವಿಶಾಲಕ್ಷಿ ಸಂಗನ ಬಸಪ್ಪ ಕಂದಗಲ್ಲ ಇವರು ಇತರೆ ಅಭ್ಯರ್ಥಿಗಳಿಂದ ಕಡಿಮೆ ಅಂಕ ಪಡೆದಿದ್ದರು ಸಹ ಅವರನ್ನು ನೇಮಕಾತಿ ಮಾಡಿಕೊಂಡಿದ್ದು ತಮ್ಮ ವಿವರಣೆಯಲ್ಲಿ ಹೆಚ್ಚು ಅಂಕ ಪಡೆದವರನ್ನು ಆಯ್ಕೆ ಮಾಡಬೇಕೆಂದು ಯಾವುದೇ ಸುತ್ತೋಲೆ ಇರುವುದಿಲ್ಲವೆಂದು ನೇರವಾಗಿ ಆರೋಪವನ್ನು ಒಪ್ಪಕೊಂಡಿರುವುದು ಮತ್ತು ಯಾವುದೇ ವಾದವನ್ನು ಮಂಡಿಸದೆ ಇರುವುದರಿಂದ ಇವರ ಮೇಲಿನ ಈ ಆರೋಪವು ಸಾಬೀತಾಗುತ್ತದೆ.

5. ಆರೋಪ 5 ರ ಬಗ್ಗೆ:– ಸ್ಥಳೀಯರಲ್ಲವೆಂದು ಗ್ರಾಮ ಪಂಚಾಯತ್‌ರವರು ಪತ್ರ ನೀಡಿದ್ದರೂ ಸಹ ಹಿಂದಿನ ಮಾನ್ಯ ಸಚಿವರು ಹೇಳಿದರೆಂದು ಹಲಗಲಿ ಗ್ರಾಮದವರಲ್ಲದ ಶ್ರೀಮತಿ ಸುಧಾ ಮಲ್ಲಪ್ಪ ಪಾಟೀಲ ಇವರನ್ನು ನೇಮಕಾತಿ ಮಾಡಿರುವ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ. ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಇವರ ಮೇಲಿನ ಈ ಆರೋಪವನ್ನು ಕೈಬಿಡಲಾಗಿದೆ.

6. ಆರೋಪ 6 ರ ಬಗ್ಗೆ:– ಐದು ಕಡತಗಳಲ್ಲಿ ನೇಮಕಾತಿ ಆದೇಶದ ಮೂಲ ಪ್ರತಿಗಳನ್ನು ಇರಿಸದೆ ಆದೇಶದ ಪ್ರತಿಗಳನ್ನು ಮಾತ್ರ ಇರಿಸಿದ್ದು ಸಾಕ್ಷಿ ಪಟ್ಟಿಯಲ್ಲಿ ಇದಕ್ಕೆ ಸಂಬಂಧಿಸಿದ ಸಾಕ್ಷಿಗಳ ಹೆಸರುಗಳನ್ನು ನಮೂದಿಸಿರುವುದಿಲ್ಲದಿರುವುದರಿಂದ ಇದು ವಿಷಯ ನಿರ್ವಾಹಕರ ಕರ್ತವ್ಯವೆಂಬುದನ್ನು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಇವರ ಮೇಲಿನ ಈ ಆರೋಪವನ್ನು ಕೈಬಿಡಲಾಗಿದೆ.

7. ಆರೋಪ 7 ರ ಬಗ್ಗೆ:– ಶ್ರೀಮತಿ ಸುಧಾ ಮಲ್ಲಪ್ಪ ಪಾಟೀಲ ಇವರು ಮನವಿ ಅರ್ಜಿ ದಿ: 26.02.2004 ರಂದು ಸಲ್ಲಿಸಿದ್ದು ಸದರಿ ಮನವಿ ಅರ್ಜಿ ಮೇಲೆ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಮುಧೋಳ ಇವರು ದಿ: 01.03.2004 ಎಂದು ಚಿಕ್ಕ ರುಜು ಮಾಡಿರುತ್ತಾರೆ. ಆ ವೇಳೆಗೆ ಚುನಾವಣಾ ಸಂಹಿತೆ ಜಾರಿಯಲ್ಲಿದ್ದು, ಆದರೂ ಕೂಡ ಸದರಿ ಅರ್ಜಿ ಕಛೇರಿಯಲ್ಲಿ ಸ್ವೀಕೃತವಾಗುವುದಕ್ಕೆ ಮುಂಚೆಯೇ ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು ಇವರು ದಿ: 27.02.2004 ರಂದು ನಮೂದಿಸಿ ತಮ್ಮ ವಿವರಣೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಯು ಸರ್ಕಾರಿ ನೌಕರರ ಹುದ್ದೆಯಲ್ಲದ ಕಾರಣ ಚುನಾವಣೆ ನೀತಿ ಸಂಹಿತೆಗೆ ಒಳಪಡುವುದಿಲ್ಲವೆಂದು ಹೇಳಿ ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ಈ ಬಗ್ಗೆ ಇರುವ ಮಾರ್ಗ ಸೂಚಿಗಳನ್ನು ಗಮನದಲ್ಲಿರಿಸದೆ ಕ್ರಮ ಕೈಗೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅವರ ಮೇಲಿನ ಆರೋಪವನ್ನು ಸಾಬೀತು ಪಡಿಸುತ್ತದೆ.

8. ಆರೋಪ 8 ರ ಬಗ್ಗೆ:– ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು ಇವರು ಚುನಾವಣಾ ಸಂಹಿತೆ ಜಾರಿಯಲ್ಲಿದ್ದರೂ ಸಹ ಶ್ರೀ ಎಸ್.ಎನ್. ಮುಚಖಂಡಿಮಠ, ಮಹಿಳಾ ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ, ಹುನಗುಂದ ಇವರನ್ನು ದಿ: 06.03.2004 ರಂದು ಬಾದಾಮಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಗೆ ನಿಯೋಜಿಸಿ, ಶ್ರೀಮತಿ ಮಾತಂಗೆವ್ವ ಮಾದರ, ಜವಾನ, ಇವರನ್ನು ದಿ: 20.03.2004 ರಂದು, ಉಪನಿರ್ದೇಶಕರ ಕಾರ್ಯಾಲಯ. ಬಾಗಲಕೋಟೆಯಿಂದ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿ ಬಿಳಗಿಗೆ ನಿಯೋಜಿಸಿ ಮತ್ತು ಶ್ರೀ ಅಶೋಕ್ ಕೆಲವಾಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಇವರನ್ನು ದಿ: 26.03.2004 ರಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಹುದ್ದೆಯಲ್ಲಿ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಿ ತಮ್ಮ ವಿವರಣೆಯಲ್ಲಿ ವರ್ಗಾವಣೆ ಮಾಡಿರುವುದಿಲ್ಲವೆಂದು, ಆಡಳಿತಾತ್ಮಕ ದೃಷ್ಟಿಯಿಂದ ನಿಯೋಜನೆ ಮಾಡಿರುವುದಾಗಿ ಹೇಳಿಕೆ ನೀಡಿರುತ್ತಾರೆ. ನೌಕರರನ್ನು ಚುನಾವಣೆ ಸಂಹಿತೆ ಜಾರಿಯಲ್ಲಿರುವಾಗ ಸ್ಥಳಾಂತರಿಸುವುದು ದಾಖಲೆಗಳಿಂದ ರುಜುವಾತಾಗಿದ್ದು, ಸಾಕ್ಷಿ ಪುರಾವೆಗಳನ್ನು ಗಮನಿಸಿದಲ್ಲಿ ಈ ಆರೋಪವು ಸಾಬಿತಾಗಿರುತ್ತದೆ.

9. ಆರೋಪ 9 ರ ಬಗ್ಗೆ:– ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರವರು ಕೇಂದ್ರ ಸ್ಥಾನದಲ್ಲಿ ಸೌಲಭ್ಯಗಳು ಇದ್ದಾಗ ಕಛೇರಿ ವಾಹನವನ್ನು ದುರುಪಯೋಗಪಡಿಸಿಕೊಂಡು ಸರ್ಕಾರದ ಆದೇಶ ಸಂಖ್ಯೆ : ಹಇ 05 ಸನೀತ 2003 ದಿ: 25.08.2003 ರನ್ವಯ ವಿಮಾನ ಪ್ರಯಾಣ ಕೈಗೊಳ್ಳಲು ಅರ್ಹತೆ ಇಲ್ಲದಿದ್ದರೂ ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಪೂರ್ವಾನುಮತಿ ಪಡೆಯುವ ಅವಶ್ಯಕತೆ ಇದ್ದರೂ ಸಹ ಪೂರ್ವಾನುಮತಿಯನ್ನು ಪಡೆಯದೆ ಸರ್ಕಾರದ ಹಣವನ್ನು ಖರ್ಚು ಮಾಡಿ ವಿಮಾನ ಟಿಕೆಟ್‌ನ್ನು ಮುಂಗಡ ಪಡೆಯಲು ವಾಹನವನ್ನು ಬಾಗಲಕೋಟೆಯಿಂದ ಬೆಳಗಾವಿಗೆ ಕಳುಹಿಸಿ ಟಿಕೆಟ್‌ನ್ನು ತರಲು ಮರಳಿ ನಿಗಧಿತ ದಿನಾಂಕದಂದು ಮತ್ತೆ ವಾಹನವನ್ನು ತೆಗೆದುಕೊಂಡು ವಾಹನವನ್ನೇ ಬಾಗಲಕೋಟೆಯಿಂದ ಬೆಳಗಾವಿಗೆ ಕೊಂಡೊಯ್ದು, ಮುಂಗಡ ಟಿಕೆಟ್‌ನ ಹಣವನ್ನು ತಮ್ಮ ಹಂತದಲ್ಲಿಯೇ ಹಲವಾರು ಬಾರಿ ಮುಂಗಡವಾಗಿ ಪಡೆದುಕೊಂಡು ವಿಮಾನ ಪ್ರಯಾಣ ಮಾಡಿ ಹಣ ದುರುಪಯೋಗ ಪಡಿಸಿಕೊಂಡು ತಮ್ಮ ವಿವರಣೆಯಲ್ಲಿ ಇತರರು ನಿರ್ವಹಿಸುವ ರೀತಿಯಲ್ಲಿ ತಾನು ಕಾರನ್ನು ಟಿಕೆಟ್ ಖರೀದಿಸಲು ಹೋಗಿರುವುದು ಕಛೇರಿಯ ಕರ್ತವ್ಯದ ಒಂದು ಭಾಗವಾಗಿದೆ ಎಂದು ಹೇಳಿ ಸಮರ್ಥಿಸಿಕೊಳ್ಳಲು ಯತ್ನಿಸುತ್ತಿರುವುದು ಆರೋಪವನ್ನು ಸಾಬೀತು ಪಡಿಸುತ್ತದೆ.

10. ಆರೋಪ 10 ರ ಬಗ್ಗೆ:– ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು ಇವರು ಸರ್ಕಾರದ ಆದೇಶ ಸಂಖ್ಯೆ ; ಎಫ್‌ಡಿ 2 ಬಿಇಎಂ 2003 ದಿ; 29.09.2003 ರನ್ವಯ ಆರ್ಥಿಕ ಮಿತವ್ಯಯ ವಿಧಿಸಿ ನಿಷೇದಿಸಿದ್ದರೂ ಸಹ ಪೀಠೋಪಕರಣ ಮತ್ತು ಮುದ್ರಣ ಮಾಡುವ ಕಾರ್ಯಗಳಿಗೆ ಸದರಿ ಆದೇಶವನ್ನು ಉಲ್ಲಂಘಿಸಿ ಜಿಲ್ಲಾ ಪಂಚಾಯತ್‌ನ ಪೂರ್ವಾನುಮತಿ ಪಡೆಯದೆ ಪೀಠೋಪಕರಣ ಮತ್ತು ಮುದ್ರಣಗಳನ್ನು ಖರೀದಿಸಿರುತ್ತಾರೆ. ಈ ಆರೋಪಕ್ಕೆ ಸಂಬಂಧಿಸಿದಂತೆ ಶ್ರೀ ಆರ್.ಬಿ. ರಜಪುತ್, ಲೆಕ್ಕಿಗರು ಇವರ ಸಾಕ್ಷ್ಯದಲ್ಲಿ ಆರೋಪಿತ ಅಧಿಕಾರಿಯು ಟೆಂಡರ್ ಕರೆದಿರುವುದಿಲ್ಲ ಮತ್ತು ಜಿಲ್ಲಾ ಅನುಮೋದನೆ ಪಡೆದಿರುವುದಿಲ್ಲ ಆದರೆ ಕಛೇರಿಗೆ ಬೇಕಾಗಿದ್ದ ನಮೂನೆಗಳ

ಬಗ್ಗೆ ಮಾತ್ರ ಟೆಂಡರ್ ಕರೆದಿದ್ದಾರೆಂದು ಹೇಳಿಕೆ ನೀಡಿರುತ್ತಾರೆ. ಈ ಆರೋಪಕ್ಕೆ ಸಂಬಂಧಿಸಿದಂತೆ ಪೂರ್ವಾನುಮತಿ ಪಡೆಯದಿರುವ ಕುರಿತು ಮತ್ತು ಸದರಿ ಆದೇಶದ ಕುರಿತು ಯಾವುದೇ ರಕ್ಷಣಾ ಹೇಳಿಕೆ ಅಥವಾ ವಿಚಾರಣೆಯ ಲಿಖಿತ ವಾದದಲ್ಲಿ ಆರೋಪಿತ ಅಧಿಕಾರಿಯು ಸಮರ್ಥನೆ ನೀಡಿಲ್ಲದಿರುವುದರಿಂದ ಸಾಕ್ಷಿ ಪುರಾವೆಗಳನ್ನು ಗಮನಿಸಿದಲ್ಲಿ ಈ ಆರೋಪವು ಸಾಬಿತಾಗಿರುತ್ತದೆ.

ಮುಂದುವರೆದು, ಆರೋಪಿತ ಅಧಿಕಾರಿಯಾದ ಶ್ರೀ ರಮೇಶ್ ಪಿ. ಭರಸ್ಕಳೆ, ಉಪನಿರ್ದೇಶಕರು ಇವರು ಮಂಡನಾಧಿಕಾರಿಯಾದ ಅಪರ ನಿರ್ದೇಶಕರು (ಆಡಳಿತ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ವಿರುದ್ಧ ವಿಚಾರಣೆ ಪ್ರಾರಂಭವಾದಾಗಿನಿಂದ ಅಸಮಧಾನ ಹೊಂದಿದ್ದು ಹಾಗೂ ಅನುಚಿತವಾಗಿ ಕೂಡ ವರ್ತಿಸಿದ್ದರಿಂದ ಮಂಡನಾಧಿಕಾರಿಗಳು ವಿಚಾರಣೆಯ ಸಮಯದಲ್ಲಿ ಗೈರು ಹಾಜರಾಗಿದ್ದು ಅವರ ಗೈರು ಹಾಜರಾತಿಯಲ್ಲಿಯೇ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ಆರೋಪಿತ ಅಧಿಕಾರಿಗಳ ವಿರುದ್ಧದ ಮೇಲಿನ 10 ಆರೋಪಗಳು ಸಾಬೀತವಾಗಿಲ್ಲವೆಂದು ನೀಡಿರುವ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಆರೋಪಿತ ಅಧಿಕಾರಿಯ ಮೇಲಿನ 5 ಹಾಗು 6 ನೇ ಆರೋಪಗಳು ಸಾಬಿತಾಗಿಲ್ಲದಿರುವುದನ್ನು ಹಾಗೂ 1,2,3,4,7,8,9 ಮತ್ತು 10 ಆರೋಪಗಳ ಬಗ್ಗೆ ವಿಚಾರಣಾಧಿಕಾರಿಗಳ ವರದಿಯಲ್ಲಿ ನ್ಯೂನತೆ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ನಡತೆ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11(ಎ)(2) ರನ್ವಯ ಮೇಲೆ ಹೇಳಿದ ದೋಷಾರೋಪಣೆಗಳಿಗೆ ಸೇರಿಸಲಾದಂತೆ ವಿಚಾರಣಾಧಿಕಾರಿಗಳ ವರದಿಯನ್ನು ತಿರಸ್ಕರಿಸಿ ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು, ಇವರ ಮೇಲಿನ 8 ಆರೋಪಗಳು ಅಂದರೆ ಆರೋಪ ಸಂಖ್ಯೆ 1,2,3,4,7,8,9 ಮತ್ತು 10 ಆರೋಪಗಳು ಸಾಬೀತಾಗಿರುವುದಾಗಿ ತೀರ್ಮಾನಿಸಿದೆ ಹಾಗೂ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 8 ರಡಿ ಸೂಕ್ತ ದಂಡನೆಯನ್ನು ವಿಧಿಸುವ ಕ್ರಮ ಕೈಗೊಳ್ಳುವ ಬಗ್ಗೆ ಪರಿಶೀಲಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಮಇ 489 ಎಸ್‌ಜೆಡಿ 2003 ಬೆಂಗಳೂರು, ದಿನಾಂಕ: 24ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಶ್ರೀ ರಮೇಶ್ ಪಿ.ಭರಸ್ಕಳೆ, ಉಪನಿರ್ದೇಶಕರು (ಮಹಿಳಾ ಕಲ್ಯಾಣ), ಪ್ರಸ್ತುತ ಉಪನಿರ್ದೇಶಕರು (ಸುಧಾರಣೆ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ತಿರಸ್ಕರಿಸಿ ಅವರ ಮೇಲಿನ ಆರೋಪಗಳಲ್ಲಿ ಆರೋಪ ಸಂಖ್ಯೆ 1,2,3,4,7,8,9 ಮತ್ತು 10 (ಒಟ್ಟು 8 ಆರೋಪಗಳು) ಗಂಭೀರವಾಗಿದ್ದು ಅವುಗಳು ಸಾಬೀತಾಗಿದೆಯೆಂದು ಸರ್ಕಾರವು ತೀರ್ಮಾನಿಸಿದೆ ಹಾಗೂ ಅದರಂತೆ ಮುಂದಿನ ಕ್ರಮವನ್ನು ಮೇಲೆ ಹೇಳಿದ ನಿಯಮಾವಳಿಯ ನಿಯಮ 8 ರಡಿಯಲ್ಲಿ ತೆಗೆದುಕೊಳ್ಳುವ ಬಗ್ಗೆ ಪರಿಶೀಲಿಸಲು ಕೂಡ ತೀರ್ಮಾನಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಂ.ಚಂದ್ರಮ್ಮ**

ಪಿ.ಆರ್. 394

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವದ್ಧಿ ಇಲಾಖೆ

**ವಿಷಯ:** **ಮಾಜಿ ದೇವದಾಸಿ ಮಹಿಳೆಯರಿಗೆ ಮಾಶಾಸನ ನೀಡುವ ಬಗ್ಗೆ**

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂ:ಮಮಇ 57.ಮಅನಿ..2006, ದಿ:07.08.2007

2 ಸರ್ಕಾರಿ ಆದೇಶ ಸಂ:ಮಮಇ 57.ಮಅನಿ..2006, ದಿ:24.09.2007.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂ (1)ರಲ್ಲಿ ಓದಲಾದ ಆದೇಶದಲ್ಲಿ ,ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಬಳ್ಳಾರಿ, ಕೊಪ್ಪಳ, ರಾಯಚೂರು, ಗುಲ್ಬರ್ಗ, ಧಾರವಾಡ, ಹಾವೇರಿ ಮತ್ತು ಗದಗ್ ಜಿಲ್ಲೆಗಳಲ್ಲಿ 1993-94ನೇ ಸಾಲಿನಲ್ಲಿ ಮಹಿಳಾ ಮತ್ತುಮಕ್ಕಳ ಅಭಿವೃದ್ಧಿ ಇಲಾಖೆಯಿಂದ ನಡೆಸಲಾದ ಸಮೀಕ್ಷೆಯಲ್ಲಿ ಗುರುತಿಸಲಾದ 45ವರ್ಷ ಮೀರಿದ ಗರಿಷ್ಟ 16,471 ಮಾಜಿ ದೇವದಾಸಿ ಮಹಿಳೆಯರಿಗೆ ಪ್ರತಿ ತಿಂಗಳು ರೂ.400/-ಗಳನ್ನು ಮಾಸಾಶನ ನೀಡಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂ (2)ರ ಸರ್ಕಾರಿ ಆದೇಶದಲ್ಲಿ ರಾಜ್ಯದ ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಾಶನ ನೀಡುವ ಹೊಸ ಯೋಜನೆಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ.

